

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೦೯-೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# "ಕೃಷ್ಣರಾಜನಗರ ತಾಲ್ಲೂಕಿನ ಪ್ರಸಿದ್ಧ ಜಾತ್ರೆಗಳು: ಒಂದು ಅಧ್ಯಯನ"

ನಿಬಂಧಕಾರರು

**ಶ್ವೇತಾ ಸಿ.ಎಂ.**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಆರ್ವಿಯಸ್ ಸುಂದರಂ**

ವಿಶ್ರಾಂತ ಕನ್ನಡ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು



**ಕುವೆಂಪು ವಿದ್ಯಾವರ್ಧಕ ಟ್ರಸ್ಟ್**

ಜಯಲಕ್ಷ್ಮೀಪುರಂ, ಮೈಸೂರು

೨೦೦೯-೧೦

889




ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೦೯-೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# "ಕೃಷ್ಣರಾಜನಗರ ತಾಲ್ಲೂಕಿನ ಪ್ರಸಿದ್ಧ ಜಾತ್ರೆಗಳು : ಒಂದು ಅಧ್ಯಯನ"


ನಿಬಂಧಕಾರರು

**ಶ್ವೇತಾ ಸಿ.ಎಂ.**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಆರ್ವಿಯಸ್ ಸುಂದರಂ**

ವಿಶ್ರಾಂತ ಕನ್ನಡ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು



ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೦೯-೧೦

# ದೃಢೀಕರಣ ಪತ್ರ

೨೦೦೯-೧೦ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS-00421**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿನಿಯಾದ ಸಿ.ಎಂ.ಶ್ವೇತಾ ಅವರು ನನ್ನ ಮಾರ್ಗದರ್ಶನದಲ್ಲಿ **"ಕೃಷ್ಣರಾಜನಗರ ತಾಲ್ಲೂಕಿನ ಪ್ರಸಿದ್ಧ ಜಾತ್ರೆಗಳು : ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಆರ್ವಿಯಸ್ ಸುಂದರಂ

**ಮೈಸೂರು**
೨೫-೦೮-೨೦೧೦

**(ಡಾ. ಆರ್ವಿಯಸ್ ಸುಂದರಂ)**
ಮಾರ್ಗದರ್ಶಕರು
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಅಭ್ಯರ್ಥಿಯ ಘೋಷಣಾ ಪತ್ರ

**"ಕೃಷ್ಣರಾಜನಗರ ತಾಲ್ಲೂಕಿನ ಪ್ರಸಿದ್ಧ ಜಾತ್ರೆಗಳು : ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ **KVTMKS-00421**ರ ವಿದ್ಯಾರ್ಥಿನಿಯಾದ ನಾನು ೨೦೦೯-೧೦ನೇ ಸಾಲಿನ ಪರೀಕ್ಷೆಗಾಗಿ ಡಾ. ಆರ್ವಿಯಸ್ ಸುಂದರಂ, ವಿಶ್ರಾಂತ ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸಿ.ಎಂ. ಶ್ವೇತಾ

**ಮೈಸೂರು**
ದಿನಾಂಕ: ೨೫-೦೮-೨೦೧೦

(ಸಿ.ಎಂ.ಶ್ವೇತಾ)
೨೦೦೯-೧೦ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಕೃಷ್ಣರಾಜನಗರ ತಾಲ್ಲೂಕಿನ ಪ್ರಸಿದ್ಧ ಜಾತ್ರೆಗಳು : ಒಂದು ಅಧ್ಯಯನ

## ಪರಿವಿಡಿ



*****

# ಅಧ್ಯಾಯ – ೧

## ಪೀಠಿಕೆ

**'ಜಾತ್ರೆ'** ಎನ್ನುವ ಪದ ಸಂಸ್ಕೃತದ 'ಯಾತ್ರಾ' ಎಂಬ ಶಬ್ದದಿಂದ ಬಂದಿದೆ. ಯಾತ್ರಾ ಪದಕ್ಕೆ ಅನೇಕ ಅರ್ಥಗಳಿವೆ. ಕನ್ನಡದಲ್ಲಿ 'ಯಾತ್ರೆ' ಮತ್ತು 'ಜಾತ್ರೆ' ಎಂಬೆರಡು ಪದಗಳೂ ರೂಢಿಯಲ್ಲಿದ್ದು, 'ಯಾತ್ರಾ' ಪದದ ಮೂಲಾರ್ಥಗಳನ್ನೆಲ್ಲಾ ಅವೆರಡೂ ಹಂಚಿಕೊಂಡಂತಿವೆ. ಜಾತ್ರೆ ಗ್ರಾಮೀಣರ ಧಾರ್ಮಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಬದುಕಿನ ಹಲವು ಅಗತ್ಯಗಳಿಗೆ ಸೂಕ್ತ ವೇದಿಕೆಯಾಗಿದೆ. ತಮ್ಮ ಕೆಲಸ ಕಾರ್ಯಗಳಿಂದ ಬಿಡುವು ಮಾಡಿಕೊಂಡ ಜನ ಜಾತ್ರೆಯ ದಿನ ಹರ್ಷದಿಂದ ಸಂಭ್ರಮ ಸಡಗರದಿಂದ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.

ಜನಪದ ಸಾಂಸ್ಕೃತಿಕ ಅಂಶಗಳ ಸೃಷ್ಟಿ ವೈವಿಧ್ಯಮಯವಾದುದು. ಈ ಸಾಂಸ್ಕೃತಿಕ ಅಂಶಗಳಲ್ಲಿ ಆಚರಣೆಗಳು ಒಂದು ಭಾಗವಾಗಿದೆ. ಇಂತಹ ಅನೇಕ ಆಚರಣೆಗಳಲ್ಲಿ ಜಾತ್ರೆಯೂ ಒಂದೆನ್ನಬಹುದು.

ಪ್ರತಿನಿತ್ಯ ಪ್ರತಿಕ್ಷಣವು ನಿಸರ್ಗದ ಮಡಿಲಲ್ಲಿ ನಿರಂತರವೂ ಶ್ರಮದಿಂದ ದುಡಿಯುವ ಗ್ರಾಮೀಣ ಜನರು ತಮ್ಮ ಬದುಕಿನ ದುಡಿಮೆಯ ಶ್ರಮ, ಆಯಾಸವನ್ನು ಮರೆಯುವ ಸಲುವಾಗಿ ಕೊಂಚ ವಿರಾಮವನ್ನು ಪಡೆದು ನೆಮ್ಮದಿಯ ಉಸಿರು ಬಿಡುವ ಸಲುವಾಗಿ ಹಬ್ಬ, ತೇರು, ಉತ್ಸವ, ಜಾತ್ರೆ ಮುಂತಾದ ಸಾಮೂಹಿಕ ಆಚರಣೆಗಳನ್ನು ಕಂಡುಕೊಂಡರು. ಈ ಆಚರಣೆಗಳು ಹುಟ್ಟಿಕೊಂಡದ್ದು, ಸಂತೋಷದ ಜೀವನವನ್ನು ಕೆಲ ದಿನಗಳಾದರೂ ನಡೆಸಬೇಕು ಎಂಬ ಸದುದ್ದೇಶದಿಂದ ಹಬ್ಬ ಜಾತ್ರೆಗಳು ಹಿಂದಿನ ಮುಖ್ಯ ಪ್ರೇರಣೆ, ವಿಧಿಗಳು ಜನಪದವೇ ಆಗಿರುವುದರಿಂದ ಇವುಗಳಲ್ಲಿ ವೈಯಕ್ತಿಕ ಕಾಳಜಿಗಿಂತ ಸಮಷ್ಟಿಯ ಉದ್ದೇಶ ಮುಖ್ಯವಾಗಿರುತ್ತದೆ. ಇಂತಹ ಸದುದ್ದೇಶವನ್ನು ಅಭಿವ್ಯಕ್ತಿಸುವ ಹಲವು ಆಚರಣೆಗಳಲ್ಲಿ ಹಬ್ಬ ಉತ್ಸವ ಮತ್ತು ಜಾತ್ರೆಗಳು ಪ್ರಮುಖವಾಗಿವೆ.

'ಜಾತ್ರೆಗಳು' ಜನಪದ ಜೀವನದ ಅವಿಭಾಜ್ಯ ಅಂಗವಾಗಿರುವಂತೆಯೇ ಜನಪದ ಸಂಸ್ಕೃತಿಯ ವಿಕಾಸಕ್ಕೆ ಚೈತನ್ಯದಾಯಿಗಳಾಗಿವೆ. ಅವುಗಳ ತಾಯಿಬೇರು. ಭೂತಕಾಲದ ಗರ್ಭದಲ್ಲಿ ಹೂತುಕೊಂಡಿದ್ದರೂ, ಅವು ಆದಿಮಾನವ ಕಾಲದಿಂದಲೇ ಧಾರ್ಮಿಕ ಆಚರಣೆಗಳ ಒಂದು ಪ್ರಮುಖ ಭಾಗವಾಗಿ ರೂಢಿಯಲ್ಲಿದ್ದಿರಬೇಕೆಂದು ತೋರುತ್ತದೆ. ಸಾಮಾನ್ಯವಾಗಿ ಆದಿಮಾನವನ ಕಾಲದ ದೇವತಾ ಆರಾಧನೆ ಮೊದಲಾದ ಧಾರ್ಮಿಕ ಆಚರಣೆಗಳು ಸಾಮೂಹಿಕವಾಗಿಯೇ ನಡೆಯುತ್ತಿದ್ದಿರಬೇಕು. ಮನುಷ್ಯನು ತನ್ನ

ನಿರಂತರವಾದ ಅಲೆಮಾರಿತನದಿಂದ ಪಾರಾಗಿ ತಾತ್ಕಾಲಿಕವಾಗಿ ಯಾದರೂ ನೀರು, ನೆರಳು ಹೊರವಾದ ನೆಲಕಂಡ ಕಡೆ ನೆಲೆಯೂರಿದ ನಂತರ ಇಂಥ ಅಲೆಮಾರಿಗಳು ಬುಡಕಟ್ಟು ಜನರಾಗಿ ಪರಿವರ್ತನೆ ಗೊಂಡ ಸಂದರ್ಭದಲ್ಲಿ ಜಾತ್ರೆಗಳು ಸರಳ ಮೂಲಾವಸ್ಥೆಯಲ್ಲಿ ಕಾಣಿಸಿಕೊಂಡಿರಬೇಕು. ಕಾಲಕ್ರಮೇಣ ಸಮಾಜದ ರೀತಿ-ನೀತಿಗಳು ಬದಲಾವಣೆ ಗೊಂಡಂತೆ, ದೇವರ ಕಲ್ಪನೆ ವ್ಯತ್ಯಾಸ ಗೊಂಡಂತೆ, ಮತೀಯ ತತ್ವಗಳು ವಿಕಾಸಗೊಂಡಂತೆ, ಧಾರ್ಮಿಕ ಆಚರಣೆಗಳು ಸಂಕಿರಣವಾಗುತ್ತವೆ. ಜನಜೀವನ ಮಾರ್ಪಾಟಾದಂತೆ ಜಾತ್ರೆಗಳೂ ಪ್ರಾಚೀನರ ಕಲ್ಪನೆಗೂ ಎಟುಕದ ಹೊಸ ಹೊಸ ಸಂಗತಿಗಳನ್ನು ಗರ್ಭೀಕರಿಸಿಕೊಂಡು ಅಳತೆಯಿಲ್ಲದೆ ಬೆಳೆಯುತ್ತವೆ. ಅಂದಂದಿನ ಜನಪದದ ಅಗತ್ಯತೆಗಳನ್ನು ಪೂರೈಸುತ್ತದೆ.

ಜಾತ್ರೆ 'ಪರಿಷೆ', 'ಪರ್ಷೆ' ಈ ಶಬ್ದಗಳು ಸಂಸ್ಕೃತದಿಂದ ಬಂದಂತವು. 'ಕೇರಿಗೊಬ್ಬ ಹನುಮಪ್ಪ, ಊರಿಗೊಂದು ಜಾತ್ರೆ' ಎಂಬ ನಾಣ್ನುಡಿ ಹೊಂದಿದೆ. ಕರ್ನಾಟಕದ ಪ್ರತಿಯೊಂದು ಊರಿನಲ್ಲಿ ಒಂದಲ್ಲಾ ಒಂದು ಜಾತ್ರೆ ನಡೆಯುತ್ತದೆ. ಸಾಮಾನ್ಯವಾಗಿ ಜನ ಸೇರಿದರೆ ಜಾತ್ರೆ ಎಂದು ಹೇಳುವುದಾದರೆ, ಮಾತು ಎಲ್ಲಾ ಪ್ರಸಂಗದಲ್ಲೂ ಅನ್ವಯಿಸುವುದಿಲ್ಲ. ಏಕೆಂದರೆ, ಜನ ಮರುಳೋ ಜಾತ್ರೆ ಮರುಳೋ ಗೊತ್ತಾಗುವುದಿಲ್ಲ. ಆದ್ದರಿಂದ ಪುಣ್ಯಕ್ಷೇತ್ರದ ಯಾತ್ರೆಯೇ ನಿಜವಾದ ಜಾತ್ರೆ. ವರ್ಷಕ್ಕೊಮ್ಮೆ ನಿಗದಿತ ಕಾಲದಲ್ಲಿ ನಡೆಯುವ ದೇವರ ಉತ್ಸವವೇ ಜಾತ್ರೆ.

ಒಂದು ನಾಡಿನ ಸ್ಥಳದ ಹೆಸರಿನಲ್ಲಿ ಅಥವಾ ಅಲ್ಲಿಯ ದೈವದ ಹೆಸರಿನಲ್ಲಿ ಸಾಮಾನ್ಯವಾಗಿ ಜಾತ್ರೆಗಳು ನಡೆದು ಜನಪ್ರಿಯವಾಗುವುದುಂಟು. ಅವು ಸಾಮಾಜಿಕ ಪರಂಪರೆಯ ಸಮಸ್ತ ಅಭಿವ್ಯಕ್ತಿಯಾದ ಜಾನಪದದ ಅನೇಕ ಅಂಶಗಳನ್ನೊಳ ಗೊಂಡಿರುತ್ತದೆ. ಹೊಂದಾಣಿಕೆ, ಬಾಂಧವ್ಯ ಹಾಗೂ ಒಂದೇ ಗ್ರಾಮದಲ್ಲಿ ವಾಸವಾಗಿರುವ ಜನರಲ್ಲಿ ಪರಸ್ಪರ ಹೊಂದಾಣಿಕೆ ಬಾಂಧವ್ಯ ಹಾಗೂ ಅಕ್ಕಪಕ್ಕದ ಗ್ರಾಮದ ಜನರೊಂದಿಗೆ ಹೊಂದಾಣಿಕೆ ಬಾಂಧವ್ಯಗಳನ್ನು ಮೊದಲು ನಾಗರಿಕತೆಯ ಸಂಪರ್ಕವಿಲ್ಲದಿದ್ದಾಗ ಸಂಪರ್ಕ ಕಲ್ಪಿಸುವಲ್ಲಿ ಜಾತ್ರೆಗಳು ಸುವರ್ಣ ಸೇತುವೆಯಾಗಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತದೆ.

ಮನುಷ್ಯನ ಆಚರಣೆಗಳಾದ ಹಬ್ಬಹರಿದಿನಗಳು, ಜಾತ್ರೆ, ಉತ್ಸವಗಳು ತಮ್ಮದೇ ಆದ ಅರ್ಥಪೂರ್ಣ ಮೂಲದಿಂದಲೂ ತಮ್ಮ ಹುಟ್ಟನ್ನು ಪಡೆದುಕೊಂಡಿರುತ್ತವೆ. ಅದು ಮನುಷ್ಯ ಪ್ರಕೃತಿಯ ಅನ್ಯೋನ್ಯತೆಯ ಸಂಕೇತವಾಗಿರಬಹುದು ಅಥವಾ ಭಯದ ಮೂಲಕಲ್ಪನೆಯಾಗಿರಬಹುದು. ಆದರೆ ಪ್ರತಿಯೊಂದು ಆಚರಣೆಯೂ ಕೂಡ ಅದರ

ವ್ಯಾಪ್ತಿಯಲ್ಲಿ, ಕಾಲದ ಹಿನ್ನೆಲೆಯಲ್ಲಿ ಅರ್ಥವನ್ನು ಪಡೆದುಕೊಂಡಿರುತ್ತದೆ. ಒಂದು ಕಾಲದ ಆಚರಣೆಗಳು ಮತ್ತೊಂದು ಕಾಲಕ್ಕೆ ಅರ್ಥಹೀನವೆನಿಸಿದರೂ ಆ ಆಚರಣೆ ತಾನು ಬದುಕಿದಷ್ಟು ಕಾಲ ಅರ್ಥಪೂರ್ಣವಾಗಿ ಸಕ್ರಿಯ ಪಾತ್ರವಹಿಸಿರುತ್ತದೆ. ಈ ಮಾತು ಸಂಸ್ಕೃತಿಯ ಯಾವುದೇ ಅಂಗಕ್ಕೂ ಅನ್ವಯಿಸುವಂಥದ್ದು, ಜಾತ್ರೆಗಳಿಗೂ ಈ ಮಾತು ಅನ್ವಯಿಸುತ್ತದೆಂದು ಮತ್ತೆ ಹೇಳಬೇಕಾಗಿಲ್ಲ.

ಜಾತ್ರೆ ಎಂಬುದು ಸಾಮಾನ್ಯವಾಗಿ ದೇವರ ಹೆಸರಿನಲ್ಲಿ ನಡೆಯುವ ಸಾಂಪ್ರದಾಯಿಕ ಪೂಜೆ-ಪುನಸ್ಕಾರಗಳಾಗಿವೆ. ಈ ಜಾತ್ರೆಗಳು ವರ್ಷಕ್ಕೆ ಒಮ್ಮೆಯೋ ಅಥವಾ ಹತ್ತಾರು ವರ್ಷಗಳಿಗೆ ಒಂದು ಬಾರಿಯೋ ನಡೆಯಬಹುದು. ದೇವರ ಜಾತ್ರೆಯ ನೆಪದಲ್ಲಿ ವ್ಯಾಪಾರ ವ್ಯವಹಾರಗಳು ನಡೆಯುತ್ತವೆ. ಊರ ಜನರಲ್ಲಿ ಒಗ್ಗಟ್ಟು ಮೂಡಿಸುವಲ್ಲಿಯೂ ಇವು ಸಹಕಾರಿಯಾಗುತ್ತವೆ. ದೈವಿಕತೆಯ ಹಿನ್ನೆಲೆಯಲ್ಲಿ ಮನುಷ್ಯ ಒಗ್ಗೂಡುವಷ್ಟು ಮತ್ತೆ ಯಾವ ಸಂದರ್ಭದಲ್ಲಿಯೂ ಸಾಧ್ಯವಿಲ್ಲ. ಈ ಅಂಶವನ್ನು ಕಂಡು ಕೊಂಡ ಜನಪದರು ಇವುಗಳನ್ನು ನಡೆಸಲು ಆಸಕ್ತಿ ತೋರಿದರು.

ಜಾತ್ರೆಗಳ ಲಕ್ಷಣಗಳು ಸಾಮಾನ್ಯವಾಗಿ ಒಂದೇ ಆದರೂ ಜಾನಪದ ಜಾತ್ರೆಗೂ ಶಿಷ್ಟ ಜಾತ್ರೆಗೂ ಹಲವಾರು ವ್ಯತ್ಯಾಸಗಳನ್ನು ನಾವು ಕಾಣಬಹುದು. ಶಿಷ್ಟ ಜಾತ್ರೆಗಳು ಪುರಾಣದ ಹಿನ್ನೆಲೆಯಲ್ಲಿ ಆಚರಿತವಾಗಿದ್ದು, ಅದರ ಪೂಜಾ ವಿಧಾನಗಳು ಆಗಮೋಕ್ತ ಪ್ರಕಾರ ನಡೆಯುತ್ತವೆ. ಆ ದೇವರ ಜಾತ್ರೆಯೂ ನಿರ್ದಿಷ್ಟ ವಾರ, ತಿಥಿ, ನಕ್ಷತ್ರಗಳಿಗನುಸಾರವಾಗಿಯೇ ನಡೆಯುತ್ತದೆ. ಇಂತಹ ಜಾತ್ರೆಗಳು ಸಾಕಷ್ಟು ಪ್ರಸಿದ್ಧಿ ಹೊಂದಿದ್ದು ಸರ್ಕಾರ ಅನೇಕ ಸೌಕರ್ಯ ಸವಲತ್ತುಗಳನ್ನು ಒದಗಿಸಿಕೊಡಬಹುದು.

**ಉದಾ:** ಬೆಂಗಳೂರು ಕರಗ, ತಲಕಾಡು ಜಾತ್ರೆ ಮುಂತಾದವು.

ಆದರೆ ಜನಪದ ಜಾತ್ರೆಗಳು ಇದಕ್ಕಿಂತ ಭಿನ್ನ, ಜನರೆಲ್ಲರ ಒಪ್ಪಿಗೆಯ ಮೇರೆಗೆ ವರ್ಷದ ಯಾವುದೋ ಒಂದು ವಾರದಲ್ಲಿ ಜಾತ್ರೆಯ ದಿನವನ್ನು ನಿರ್ಧರಿಸುತ್ತಾರೆ. ನಿರ್ಧರಿಸಿದ ದಿನ ಜಾತ್ರೆ ನಡೆಯುತ್ತದೆ.

ಇನ್ನೂ ಕೆಲವು ಜಾತ್ರೆಗಳು ಶಿಷ್ಟ ಮತ್ತು ಜನಪದ ಆಚರಣೆಗಳ ಸಂಗಮವಾಗಿರುವುದನ್ನು ಕಾಣಬಹುದು. ಜಾತ್ರೆಗಳು, ಜಾತ್ರೆಯ ದೃಷ್ಟಿಯಿಂದ ಬೆಳೆದು ಬಂದಿದ್ದರೂ ಜಾತ್ಯಾತೀತತೆಯನ್ನು ಮೆರೆಯುವ ಜಾತ್ರೆಗಳನ್ನು ನಾವು ಕಾಣಬಹುದು. ಕೆಲವು ದೇವರುಗಳನ್ನು ಕೆಲವು ಜಾತಿಯವರು ಮಾತ್ರ ಪೂಜಿಸಿದರೆ ಮತ್ತೆ ಕೆಲವು ಜಾತಿಯವರು ಪೂಜಿಸುವುದಿಲ್ಲ.

**ಉದಾ:** ಮಹದೇಶ್ವರ ಮತ್ತು ಮಂಟೇಸ್ವಾಮಿಗಳ ಜಾತ್ರೆಗಳಿಗೆ ಬ್ರಾಹ್ಮಣರು ಹೋಗುವುದಿಲ್ಲ ಆದರೆ ಕೆಲವು ಜಾತ್ರೆಗಳು ಎಲ್ಲಾ ಜಾತಿಯ ಜನರು ಸೇರಿ ಮಾಡುವಂತಹುದ್ದಾಗಿರುತ್ತದೆ.

ಕನ್ನಡ ನಾಡಿನಲ್ಲಿ ಜಾತ್ರೆಗಳು ಎಂದು ಆರಂಭವಾದುವೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಬ್ರಹ್ಮ ಶಿವನ 'ಸಮಯಪರೀಕ್ಷೆ' ಮತ್ತು ಜನ್ನನ 'ಯಶೋಧರ–ಚರಿತೆ'ಗಳಲ್ಲಿ ಮೊಟ್ಟ ಮೊದಲು ಜಾತ್ರೆಗಳ ವಿವರಣೆ ಬರುತ್ತದೆ. 'ತೇರು' ಎನ್ನುವ ಪದ ಪ್ರಪ್ರಥಮವಾಗಿ ಪಂಪನಲ್ಲಿ ದೊರೆಯುತ್ತದೆ, ತೇರು ಜಾತ್ರೆಗಳ ಅನಿವಾರ್ಯ ಅಂಗವಾದ್ದರಿಂದ ಒಂದು ಸಾವಿರ ವರ್ಷಗಳ ಹಿಂದಕ್ಕೆ ಜಾತ್ರೆಗಳ ಇತಿಹಾಸವನ್ನು ಬಿತ್ತರಿಸಲು ಸಾಧ್ಯವಿದೆ.

ಕರ್ನಾಟಕದಲ್ಲಿ ಇಂದು ಸಾವಿರಾರು ಜಾತ್ರೆಗಳು ಕಂಡುಬರುತ್ತವೆ. ಆದರೆ ಅವುಗಳ ಆಚರಣೆಗಳಲ್ಲಿ ಪ್ರತಿಯೊಂದು ಜಾತ್ರೆಯೂ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿರುತ್ತದೆ, ಮತ್ತು ಅಪೂರ್ವ ಕಲ್ಪನೆಯೂ ಇದಕ್ಕಿರುತ್ತದೆ. ಅಂತಹ ಜಾತ್ರೆಗಳಲ್ಲಿ ಕೃಷ್ಣರಾಜನಗರ ತಾಲ್ಲೂಕಿನಲ್ಲಿ ನಡೆಯುವ ಪ್ರಸಿದ್ಧ ಜಾತ್ರೆಗಳ ಬಗ್ಗೆ ಇಲ್ಲಿನ ಜನರಿಂದ ಮತ್ತು ಅರ್ಚಕರಿಂದ ಸಂಗ್ರಹಿಸಿದ ಆಚರಣೆ ಮತ್ತು ಸಂಪ್ರದಾಯಗಳನ್ನು ವಿವರಿಸುವ ಪ್ರಯತ್ನ ಮಾಡಿದ್ದೇನೆ.

## ಅಧ್ಯಾಯ – ೨

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ನಿಬಂಧ ರಚನೆಗೆಂದು ಆರಿಸಿಕೊಂಡ "ಕೃಷ್ಣರಾಜನಗರ ತಾಲ್ಲೂಕಿನ ಪ್ರಸಿದ್ಧ ಜಾತ್ರೆಗಳು ಒಂದು ಅಧ್ಯಯನ" ಜನಪದ ಸಂಸ್ಕೃತಿಯ ಅಧ್ಯಯನವಾದುದರಿಂದ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನೂ ತೆರೆಯುವಂಥದಾಗಿರುತ್ತದೆ.

ಸಂಘಜೀವಿಯಾದ ಮಾನವನ ಬದುಕನ್ನು ರೂಪಿಸುವಲ್ಲಿ, ಸಂಸ್ಕೃತಿಯನ್ನು ಪೋಷಿಸುವಲ್ಲಿ ನಾಗರಿಕತೆಯನ್ನು ಬೆಳೆಸುವಲ್ಲಿ ಸಂಪ್ರದಾಯದ ಆಚರಣೆಗೆ ವಿಶೇಷವಾದ ಮಹತ್ವವಿದೆ ಎನ್ನಬಹುದು. ಇವು ಬದುಕಿನ ಅವಿಭಾಜ್ಯ ಅಂಗಗಳಾಗಿದ್ದು; ಸಮಾಜವನ್ನು ಒಂದುಗೂಡಿಸುವ ಹಾಗೂ ಮುನ್ನೆಡೆಸುವ ದಾರಿದೀವಿಗೆಗಳಾಗಿವೆ.

'ಜಾನಪದ' ಎಂದರೆ ಜನಪದರ ಮೌಖಿಕ ಅಭಿವ್ಯಕ್ತಿ ತಲೆಮಾರಿನಿಂದ ತಲೆಮಾರಿಗೆ ಮೌಖಿಕವಾಗಿ ಅಥವಾ ಕಂಠಸ್ಥ ರೂಪದಲ್ಲಿ ಸಂವಹನಗೊಂಡದ್ದು ಜನಪದರನ್ನು ಕುರಿತು ಅಧ್ಯಯನ ಮಾಡುವುದು ಜಾನಪದ. ಜಾನಪದ ಒಂದು ಅಂತರ್‌ಶಿಸ್ತೀಯ ಅಧ್ಯಯನ, ಜಾನಪದ, ಕತೆ, ಪುರಾಣ, ಐತಿಹ್ಯ, ಗಾದೆಗಳು, ಒಗಟುಗಳು, ಕುಣಿತಗಳು, ಗೀತೆಗಳು, ಲಾವಣಿಗಳಂತಹ ಪ್ರಕಾರಗಳನ್ನು ಒಳಗೊಂಡಿದೆ. ಜಾನಪದ ಎನ್ನುವಂಥದ್ದು ಒಂದು ಸಾರ್ವತ್ರಿಕ ಅಧ್ಯಯನ. ಇದು ನಿಂತ ನೀರಲ್ಲ; ಸದಾ ಹರಿಯುವ ನೀರು. ಆದ್ದರಿಂದ ಜನಪದವನ್ನು ನಿತ್ಯಪರಿವರ್ತನಾಶೀಲವೆಂದು ಹೇಳುತ್ತಾರೆ.

ಒಟ್ಟಿನಲ್ಲಿ ಇದು ಸಂಪ್ರದಾಯದ ಜ್ಞಾನಕ್ರಿಯೆಗಳ ಮುಪ್ಪುರಿ. ಅನೇಕ ಶತಮಾನಗಳ ಹಿಂದೆ ಸೂರ್ಯನಿಂದ ಸಿಡಿದು ಬಂದ ಅಂಶದಿಂದ ಕಾಲಗರ್ಭದಲ್ಲಿ ರೂಪುಗೊಂಡ ಭೂಮಿ ಜೀವಸಂತಾನಕ್ಕೆ ಆಶ್ರಯ ನೀಡಿತು, ಭೂಸೃಷ್ಟಿಯ ಎಷ್ಟೋ ವರ್ಷಗಳ ಮೇಲೆ ಮನುಷ್ಯನ ಸೃಷ್ಟಿಯಾಯಿತು. ಭೂಭಾಗದಲ್ಲಿ ಎಲ್ಲೆಲ್ಲಾ ಜೀವ ಸೃಷ್ಟಿಗೆ ಅವಕಾಶವಿತ್ತೋ ಅಲ್ಲೆಲ್ಲಾ ಬಹುಶಃ ಏಕಕಾಲದಲ್ಲಿ ಮಾನವ ಸೃಷ್ಟಿಯಾಗಿದೆ. ನಿರ್ದಿಷ್ಟ ಪ್ರದೇಶದಲ್ಲಿ, ನಿರ್ದಿಷ್ಟ ಜನಸಮುದಾಯ ಪಾದವೂರಿದ್ದೇ ಜಾನಪದವಾಯಿತು. ಜನರಿಗೆ ಸಂಬಂಧಿಸಿದ್ದು ಜಾನಪದ. ಪುರಾತನ ಜನಸಮುದಾಯಕ್ಕೆ ಸ್ಪಷ್ಟವಾದ ಕಾಲಮಾನವನ್ನು ಸೂಚಿಸುವುದಕ್ಕೆ ಆಗುವುದಿಲ್ಲವಾದರೂ ಅದು ಪ್ರಾಚೀನವಾದುದು ಎಂದಷ್ಟೇ ಹೇಳಬಹುದು. ಜೀವಕೋಟಿಯ ನಿರ್ದಿಷ್ಟ ಜನಸಮುದಾಯ ತನ್ನ ಉಳಿವಿಗೆ, ಸಂಸಾರಕ್ಕೆ, ಸಮಾಜಕ್ಕೆ, ಬದುಕಿಗೆ, ಸಾವಿಗೆ ಹುಟ್ಟಿನಿಂದ ಅಂತ್ಯದವರೆಗೆ

ಕೆಲವು ಸಂಪ್ರದಾಯ ರೀತಿ–ನೀತಿ, ಆಚಾರ–ವಿಚಾರ, ವಿಧಿ–ವಿಧಾನ ಮೊದಲಾದವು–ಗಳನ್ನು ರೂಢಿಗೆ ತಂದಿತ್ತು. ಇದೆಲ್ಲ ಜನಪದದ ಅಂಗವಾಯಿತು. ಜನರು ಮತ್ತು ಜನರ ಬದುಕು ಜನಪದವಾಯಿತು. ಹೀಗೆ ಜನಪದದ ಅಂಶಗಳಲ್ಲಿ ಒಂದಾದ ದೇವಾಲಯಗಳು ಮತ್ತು ದೇವರ ಹೆಸರಿನಲ್ಲಿ ನಡೆಯುವ ಜಾತ್ರೆಗಳು ಪ್ರಮುಖವಾಗುತ್ತದೆ.

ಈಗಿನ ಆಧುನಿಕ ಕಾಲದಲ್ಲಿ ಇದರ ಸ್ಥಾನ ಕಡಿಮೆಯಾದರೂ ಇದು ಮತ್ತೊಂದು ರೀತಿಯಲ್ಲಿ ಸ್ಥಾನ ಪಡೆಯುತ್ತಾ ಹೋಗುತ್ತದೆ. ಜಾನಪದ ಎನ್ನುವುದು ಮನುಷ್ಯನ ಹುಟ್ಟಿನ ಜೊತೆಯಲ್ಲಿಯೇ ಬರುತ್ತದೆ. ಇವತ್ತು ಜಾನಪದ ಇತರ ಅಧ್ಯಯನಕ್ಕಿಂತ ಪ್ರತ್ಯೇಕಸ್ಥಾನ ಪಡೆಯುತ್ತಾ ಇದೆ. ಉದಾಹರಣೆಗೆ ಅಮೆರಿಕಾ, ರಷ್ಯಾ, ಜರ್ಮನ್, ಇಂಗ್ಲೆಂಡ್, ಫ್ರಾನ್ಸ್ ಇನ್ನಿತರ ದೇಶಗಳಷ್ಟೇ ಅಲ್ಲದೆ ರಾಜ್ಯ, ಜಿಲ್ಲೆ, ತಾಲ್ಲೂಕು, ಪಟ್ಟಣಗಳಲ್ಲಿ, ಹಳ್ಳಿಗಳಲ್ಲಿ ಜಾನಪದದ ಬಗ್ಗೆ ಅಧ್ಯಯನ ನಡೆಯಬೇಕು. ಜನಪದ ಬಗ್ಗೆ ತಿಳಿಯಬೇಕೆಂದರೆ 'ಕ್ಷೇತ್ರಕಾರ್ಯ' ತುಂಬಾ ಅಗತ್ಯ.

ದೇವಾಲಯಗಳ ಸ್ಥಾಪನೆ ನಾಡಿನ ಸಾಂಸ್ಕೃತಿಕ ಬೆಳವಣಿಗೆಗೆ ಭದ್ರವಾದ ಬುನಾದಿಯನ್ನು ಒದಗಿಸುವುದರ ಜೊತೆಗೆ ಜನರ ನೈತಿಕ ಮಟ್ಟವನ್ನು ಹೆಚ್ಚಿಸಿ ಧಾರ್ಮಿಕ ವಿಧಿ–ವಿಧಾನಗಳ ಮನೋಭಾವವನ್ನು ಸಮೃದ್ಧಿಗೊಳಿಸುವಲ್ಲಿ ಸಹಕಾರಿಯಾಗಿದೆ. ಜನರ ಧಾರ್ಮಿಕ ಚಟುವಟಿಕೆಗಳನ್ನು ಅತ್ಯಂತ ಪ್ರಬಲವಾಗಿ ನಿರೂಪಿಸುವಂತಹ ಮಾಧ್ಯಮಗಳೆಂದರೆ ದೇವಾಲಯಗಳು. ಇಂತಹ ದೇವಾಲಯಗಳನ್ನು ಕೇಂದ್ರವಾಗಿಟ್ಟುಕೊಂಡು ಯಾವುದೋ ನಿಗದಿಯಾದ ವೇಳೆಯಲ್ಲಿ ಪರೀಕ್ಷೆ ನಡೆಯುವುದು ಇದೇ ಜಾತ್ರೆ. ಜಾತ್ರೆಯ ಒಂದು ಮಗ್ಗಲು ಪ್ರಯಾಣ, ಯಾತ್ರೆ, 'ಯಾತ್ರ' ಹೋಗು 'ಜಾತ್ರೆ'. ಹೊರಡು, ಎಂಬ ಪದಗಳು ಜನರು ಗುಂಪು ಗುಂಪಾಗಿ ಹೋಗುವುದನ್ನು ಸೂಚಿಸುತ್ತವೆ. ಗ್ರಾಮೀಣ ಜಾತ್ರೆಗಳು ಶುದ್ಧ ಜನಪದ ಸಂಸ್ಕೃತಿ–ಯಿಂದ ಕೂಡಿರುವಂಥವು. ಇಲ್ಲಿ ಸ್ನೇಹ, ಸಹಕಾರ ಸಂಬಂಧಗಳು ಸಂಗಮ–ವಾಗಿರುತ್ತದೆ. ಇಂಥ ಜಾತ್ರೆಗಳು ಸಾಮಾನ್ಯವಾಗಿ ಹಳ್ಳಿಯವರ ಸಮ್ಮುಖದಲ್ಲಿ ಮುಂದುವರಿಯುತ್ತಾ ಬಂದವು. ಇಂದಿಗೂ ಕರ್ನಾಟಕದ ಅನೇಕ ಜಾತ್ರೆಗಳು ನಾಗರಿಕತೆಯಿಂದ ದೂರವಿದ್ದು, ತನ್ನತನವನ್ನು ಉಳಿಸಿಕೊಂಡು ಬಂದಿದೆ.

ಯಾವುದೋ ಒಂದು ನಿರ್ದಿಷ್ಟ ವೇಳೆಯಲ್ಲಿ ಜನರೆಲ್ಲಾ ಸೇರಿ ದೇವರನ್ನು ಪೂಜಿಸುವುದಕ್ಕೆ 'ಜಾತ್ರೆ' ಎಂದು ಕರೆಯುತ್ತಾ ಬಂದಿದ್ದೇವೆ. ಜನರು ಇದರ ಮುಖ್ಯ ಬಂಡವಾಳ. ಇಡೀ ವರ್ಷದ ಬದುಕಿನಲ್ಲಿ ನೋವು–ನಲಿವುಗಳನ್ನು ಅನುಭವಿಸಿದ ಜನ

ಯಾಂತ್ರಿಕತೆ ಮತ್ತು ಏಕತಾನತೆಯಲ್ಲಿ ಬೆಂಡಾದ ಜನ ತಮ್ಮ ತಮ್ಮ ಕುಟುಂಬದ ಸದಸ್ಯರೊಂದಿಗೆ ಹರಟೆ ಹೊಡೆಯುತ್ತಾರೆ. ನಾನಾ ರೀತಿಯ ದೃಷ್ಯಗಳನ್ನು ಗಮನಿಸುತ್ತಾ ತಮ್ಮ ಹಣಕಾಸಿನ ಪರಿಸ್ಥಿತಿಗೆ ತಕ್ಕಂತೆ ವಸ್ತುಗಳನ್ನು ಕೊಂಡುಕೊಳ್ಳಲು, ಸಂತೋಷ ಪಡಲು ಸೂಕ್ತ ಅವಕಾಶವನ್ನು ನೀಡುವ ಪರಿಸರವೇ 'ಜಾತ್ರೆ'.

ಜಾತ್ರೆಗಳು ಜನತೆಯ ಬದುಕಿನ್ಲಲಿ ಗಾಢ ಸಂಬಂಧವನ್ನು ಇರಿಸಿಕೊಂಡಿದೆ. ಜಾತ್ರೆಗೆ ಆರ್ಥಿಕ, ಚಾರಿತ್ರಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕವಾದ ಹಲವಾರು ಮುಖಗಳಿವೆ. ಇಷ್ಟೆಲ್ಲಾ ಇದ್ದರೂ ಜಾತ್ರೆಗಳು ಪ್ರಧಾನತಃ ಆಚರಣೆಗಳು. ಇಲ್ಲಿ ದೇವರ ಮಹಿಮೆಗಳನ್ನು ಮಾಡುವನು, ಐತಿಹ್ಯಗಳನ್ನು ಕೊಂಡಾಡುತ್ತಾರೆ, ಆಚರಿಸುತ್ತಾರೆ. ಭಕ್ತರು ಅದೇ ಆಚರಣೆಯನ್ನು ಪ್ರತಿ ಜಾತ್ರೆಯಲ್ಲೂ ಪುನರಾರಂಭಿಸ ತೊಡಗುತ್ತಾರೆ. ಪರಂಪರೆಯನ್ನು ಮುಂದುವರಿಸತೊಡಗುತ್ತಾರೆ. ಅಂದರೆ ಜಾತ್ರೆಗಳು ಪ್ರಮುಖವಾಗಿ ಆಚರಣೆಗಳಿಂದ ಕೂಡಿರುತ್ತವೆ ಎಂದರ್ಥ. ಬಂದಿರುವ ಭಕ್ತಾದಿಗಳು ತಮಗಿರುವ ಭಕ್ತಿಯನ್ನು ದೃಢಪಡಿಸುತ್ತಾರೆ. ಹಾಗಾಗಿ ಜಾತ್ರೆಗಳು ಭಕ್ತಿ ಪರಂಪರೆಯನ್ನು ಮುಂದುವರೆಸುವ ಮಾಧ್ಯಮಗಳಾಗಿ ಕಾಣಿಸುತ್ತವೆ.

ನಮ್ಮಲ್ಲಿ ೧೨-೧೫ ದಿನಗಳವರೆಗೂ ನಡೆಯುವ ಜಾತ್ರೆಗಳಿವೆ. ಒಂದು ತಿಂಗಳುಗಳ ಕಾಲ ನಡೆಯುವ ಜಾತ್ರೆಗಳೂ ಇವೆ. ಈ ಉತ್ಸವದಲ್ಲಿ ತೇರನ್ನು ಎಳೆಯುವುದು ಒಂದು ಮುಖ್ಯಭಾಗ. ಮೆರವಣಿಗೆ ಬಂದ ತೇರಿನ ಮೇಲೆ ಬಾಳೆಹಣ್ಣು ಜವನವನ್ನು ಎಸೆಯುವುದು, ತೇರಿನ ಹಗ್ಗ ಎಳೆದು ಕೃತಾರ್ಥರಾದೆವೆಂಬ ಭಾವನೆಯಲ್ಲಿ ನಿಲ್ಲುವುದು, ಅಲ್ಲಲ್ಲಿ ನಿರ್ಮಿಸಿದ ಪಾನಕ ಸೇವಿಸಲು ಗುಂಪಾಗಿ ನಿಂತು ಕೈಚಾಚುವುದು, ಕಿಕ್ಕಿರಿದ ಭಕ್ತಾದಿಗಳಿಂದ ಕೂಡಿದ ಗುಡಿಯ ಒಳಾವರಣದಲ್ಲಿ ನಿರಂತರವಾಗಿ ಕೇಳಿ ಬರುವ ಗಂಟೆಯ ಮಧುರ ನಿನಾದ ಇವೆಲ್ಲಾ ಜಾತ್ರೆಯ ಪ್ರಮುಖ ಲಕ್ಷಣಗಳು.

ಹಬ್ಬಕ್ಕೂ ಜಾತ್ರೆಗೂ ವ್ಯತ್ಯಾಸವಿರುವುದನ್ನು ಕಾಣುತ್ತೇವೆ. ಹಬ್ಬ ಮನೆಗಳಲ್ಲಿ ಆಚರಿಸುವಂತಹುದು, ಜಾತ್ರೆ ಮನೆಯ ಹೊರಗಡೆ ಧಾರ್ಮಿಕ ಕ್ಷೇತ್ರವೊಂದರಲ್ಲಿ ಸಾಮೂಹಿಕವಾಗಿ ಆಚರಿಸುವಂಥದ್ದು.

ಜನಪದದ ಪ್ರಮುಖ ಅಂಶವಾದ ಜಾತ್ರೆಗಳ ಬಗ್ಗೆ ಈ ಅಧ್ಯಯನವು ತನ್ನ ಹರವನ್ನು ಹಾಸಿದೆ. ಯಾವುದಾದರೊಂದು ದೇವರ ಹೆಸರಿನಲ್ಲಿ ಆಕರ್ಷಿಸುವ ಒಂದು ರೀತಿಯ ಹಬ್ಬವೇ 'ಜಾತ್ರೆ', ತೇರು ಮೆರವಣಿಗೆ ಮತ್ತು ಹಬ್ಬ ಎಂಬ ಅರ್ಥಗಳನ್ನು ಈ ಪದ ಪಡೆದಿದೆ. ಜಾತ್ರೆ ನಡೆಯುವಾಗಲೆಲ್ಲಾ ಹಬ್ಬವಿರುತ್ತದೆ. ಹಬ್ಬ ನಡೆಯುವಾಗಲೆಲ್ಲಾ ಜಾತ್ರೆ ಇರಬೇಕೆಂದೇನೂ ಇಲ್ಲ. ಈ ನಿಯಮದ ಅನುಸಾರವಾಗಿ ಇಲ್ಲಿನ ಜಾತ್ರೆಗಳು

ನಡೆಯುತ್ತವೆ. ಜಾತ್ರೆಗಳು ಸಾಮಾನ್ಯವಾಗಿ ಒಂದಕ್ಕಿಂತ ಒಂದು ಭಿನ್ನವಾಗಿ ತಮ್ಮದೇ ಆದ ವಿಶಿಷ್ಟತೆಯಿಂದ ಕೂಡಿವೆ. ಈ ಜಾತ್ರೆಗಳ ಅಧ್ಯಯನದಿಂದ ಸ್ಥಳೀಯ ಸಂಪ್ರದಾಯ ವಿಧಿ-ವಿಧಾನಗಳು ಸಂಸ್ಕೃತಿಯ ವೈಶಿಷ್ಟ್ಯಗಳು ಪ್ರಾದೇಶಿಕ ಭಿನ್ನತೆಗಳನ್ನು ತಿಳಿಯಬಹುದಾಗಿದೆ.

'ಕೃಷ್ಣರಾಜನಗರ ತಾಲ್ಲೂಕಿನ ಪ್ರಸಿದ್ಧ ಜಾತ್ರೆಗಳು' ನಿಬಂಧವು ಕೃಷ್ಣರಾಜನಗರ ತಾಲ್ಲೂಕಿನಲ್ಲಿ ನಡೆಯುವ ಪ್ರಸಿದ್ಧ ಜಾತ್ರೆಗಳನ್ನು ಕುರಿತ ಅಧ್ಯಯನ ಈ ನಿಬಂಧದಲ್ಲಿ ಸ್ಥಳನಾಮಗಳು ಬರಲು ಕಾರಣ, ಭೌಗೋಳಿಕ ಹಿನ್ನೆಲೆ, ಐತಿಹ್ಯಗಳನ್ನು ಚರ್ಚಿಸಲಾಗಿದೆ. ಇದಲ್ಲದೆ ದೇವಾಲಯ ನಿರ್ಮಾಣದ ಬಗ್ಗೆ ಮುಖ್ಯವಾಗಿ ದೇವಾಲಯಗಳಲ್ಲಿ ನಡೆಯುವ ಜಾತ್ರೆ, ಸಂಪ್ರದಾಯಗಳು ಅದರಲ್ಲಿ ಆಚರಿಸಲ್ಪಡುವ ವಿಧಿ-ವಿಧಾನಗಳು, ಸಂಸ್ಕೃತಿಗಳನ್ನು, ಜಾತ್ರೆಯ ವೈಶಿಷ್ಟ್ಯ ಮುಂತಾದ ಸಂಗತಿಗಳನ್ನು ಈ ಅಧ್ಯಯನವು ಒಳಗೊಂಡಿದೆ.

# ಅಧ್ಯಾಯ – ೩

## ಜಾತ್ರೆಗಳ ಸ್ವರೂಪ ಮತ್ತು ಪ್ರಸ್ತುತತೆ

ಬುದ್ಧಿ ಜೀವಿಯೂ ಶ್ರಮಜೀವಿಯೂ ಆದ ಮನುಷ್ಯ ತನ್ನ ಬದುಕಿನಿಂದ ವಿರಾಮವನ್ನು ಪಡೆದಯಲೆತ್ನಿಸಿದ ಸಂದರ್ಭದಲ್ಲಿ ಸಂತೋಷವಾಗಿ ಇರಲು ಹಬ್ಬ, ತೇರು, ಉತ್ಸವ, ಜಾತ್ರೆ ಮೊದಲಾದ ಸಮಷ್ಟಿ ಸ್ವರೂಪದ ಆಚರಣೆಗಳಿಗೆ ಮಾರುಹೋದ. ಈ ಆಚರಣೆಗಳೆಲ್ಲಾ ಜನಜೀವನದ ಭಾಗವಾಗಿ ಮೂಡಿಬಂದಿದ್ದರಿಂದ ಇಲ್ಲಿ ವೈಯಕ್ತಿಕತೆಗಿಂತ ಸಮಷ್ಟಿಯ ಹಿತಾಸಕ್ತಿಯೇ ಪ್ರಮುಖವಾಗಿರುತ್ತದೆ. ತಾವಿರುವ ಪರಿಸರದ ಹಿತರಕ್ಷಣೆಯೇ ಈ ಆಚರಣೆಗಳ ಪ್ರಮುಖ ಉದ್ದೇಶವಾಗಿರುತ್ತದೆ. ಇಂತಹವುಗಳಲ್ಲಿ ಜಾತ್ರೆಗಳ ಪಾತ್ರ ಗಮನಾರ್ಹವಾದುದು. ಜಾತ್ರೆಗಳು ನಡೆಯುವ ಸ್ಥಳದ ಹೆಸರಿನಿಂದ ಅಥವಾ ಅಲ್ಲಿಯ ದೇವರ ಹೆಸರಿನಿಂದ ಜನಪ್ರಿಯತೆಯನ್ನು ಗಳಿಸಿರುತ್ತದೆ. ಪರಂಪರಾಗತವಾಗಿ ಬಂದ ಇವು ಹಲವಾರು ಆಶಯಗಳನ್ನೊಳ–ಗೊಂಡಿರುತ್ತವೆ.

ಜಾತ್ರೆ ನಡೆಯುವ ಕಡೆ ಹಬ್ಬದ ವಾತಾವರಣವಿರುತ್ತದೆ. ಜಾತ್ರೆಗಳು ಧಾರ್ಮಿಕ ಬದುಕನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಏನೇ ಕಷ್ಟ ಬಂದರೂ ಇಂಥ ದೇವತೆಯನ್ನು ಸ್ಮರಿಸಿಕೊಂಡರೆ ಅದು ಪರಿಹಾರವಾಗುತ್ತದೆಂಬ ಬಲವಾದ ನಂಬಿಕೆ ಜನಪದರಲ್ಲಿ ಮೂಢಿರುವುದನ್ನು ನಾವು ಕಾಣಬಹುದಾಗಿದೆ. ಈ ಜಾತ್ರೆಗಳ ಸ್ವರೂಪದಲ್ಲಿ ಒಂದು ಬಗೆಯ ತಿದ್ದಿದ ಮಾಟ, ಓರಣವಿದೆ. ಕ್ರೈಸ್ತ ಮತೀಯರ ಪೆಸ್ತೆ, ಮಹಮದೀಯರ 'ಉರುಸ್' ಮುಂತಾದವುಗಳನ್ನು ಈ ಮಾಲಿಕೆಯಲ್ಲಿಯೇ ನೆನೆಯಬಹುದಾಗಿದೆ. ಶಿಷ್ಟ ಜಾತ್ರೆಗಳ ಹೊರತಾಗಿ ಆಚರಣೆ ವಿಧಿ–ವಿಧಾನಗಳಲ್ಲಿ ಸ್ವಲ್ಪ ಭಿನ್ನಸ್ವರೂಪವುಳ್ಳ ಜಾತ್ರೆಗಳಿವೆ.

ಜಾತ್ರೆಯಲ್ಲಿ ಅಸಂಖ್ಯಾತ ಕೋಲಿ, ಕುರಿ, ಕೋಣ, ಹಂದಿಗಳ ಬಲಿಯಾಗುತ್ತದೆ. ಅನೇಕ ವೇಳೆ ನರಬಲಿಯೂ ನಡೆಯುತ್ತಿದ್ದುದಕ್ಕೆ ಕುರುಹುಗಳನ್ನು ಹಿಂದಿನ ಜಾತ್ರೆಗಳ ಚಡಂಗಗಳಲ್ಲಿ ಗುರುತಿಸಬಹುದು. ಜಾತ್ರೆ ನಡೆಯುವುದು ಆಯಾ ಊರಿನ ಪ್ರಧಾನ ದೇವತೆಯ ಹೆಸರಿನಲ್ಲಿ. ಆಗ ದೇವತೆಯ ಪರಿವಾರ ದೇವತೆಗಳಿಗೂ ಪೂಜೆ, ಪುನಸ್ಕಾರಗಳು, ನೈವೇದ್ಯ, ಬಲಿಗಳು ಸಲ್ಲುತ್ತವೆ. ಜನಪದ ದೇವತೆಗಳಿಗೆ ಸಂಬಂಧಿಸಿದ ಪೂಜೆ ಸುಲಭವಾಗಿ ಕಂಡರೂ ಜಾತ್ರೆಗೆ ಸಂಬಂಧಿಸಿದ ಆಚರಣೆಗಳು ಒಮ್ಮೊಮ್ಮೆ ಕ್ಲಿಷ್ಟ ಹಾಗೂ ಭೀಕರವಾಗಿರುತ್ತವೆ.

ಜಾತ್ರೆಗೆ ಧಾರ್ಮಿಕ ಸ್ವರೂಪವಿರುವಂತೆಯೇ, ಸಾಮಾಜಿಕ ಸ್ವರೂಪವೂ ಇದೆ. ಇಲ್ಲಿ ಜನ, ಜಾತಿ–ಭೇದವಿಲ್ಲದೆ ಬೆರೆಯುತ್ತಾರೆ. ಹರಕೆ ಸಲ್ಲಿಸಿ ಕಷ್ಟ–ಸುಖಗಳ ಮಾತುಕತೆಯಲ್ಲಿ ತೊಡಗುತ್ತಾರೆ.

ಜನರನ್ನು ಒಂದುಕಡೆ ಸೇರಿಸಿ ಗಟ್ಟಿ ಬದುಕಿಗೆ ತೊಡಗಿಸುವ ನೈತಿಕ ಪ್ರಜ್ಞೆ ಮೂಡಿಸುವ ಈ ಜಾತ್ರೆಗಳು ಜನರಲ್ಲಿ ಚೈತನ್ಯ ತುಂಬುವ ಪ್ರೇರಣೆಗಳಾಗಿವೆ.

ಬಯಲಾಟ, ದೊಂಬರಾಟ, ಇಂದ್ರಜಾಲ, ಮಹೇಂದ್ರಜಾಲ, ಡೊಳ್ಳುಕುಣಿತ, ಕರಗದ ಕುಣಿತ, ಸೋಮನಕುಣಿತ, ಕೋಲುಕುಣಿತ, ಕರಡಿ ಕುಣಿತ, ಭೂತದ ಕುಣಿತ ಇತ್ಯಾದಿ. ಜನಪದ ಕಲೆಗಳಿಗೆ ಜಾತ್ರೆಗಳು ಆಶ್ರಯ ನೀಡಿವೆ. ಇಂಥ ಕಲಾ ಪ್ರದರ್ಶನಗಳ ಮೂಲಕ ಜನಮನ ರಂಜನೆಯನ್ನು ಪಡೆಯುತ್ತಿದ್ದಾರೆ. ಅಂದರೆ ಕಲಾವಿದರಿಗೆ ಕಲಾಪ್ರದರ್ಶನಕ್ಕೆ ಜಾತ್ರೆಗಳು ಅವಕಾಶ ನೀಡುತ್ತಾ ಬಂದಿವೆ.

ಜಾತ್ರೆಗಳು ಪ್ರೇಮಿಗಳು ಪರಸ್ಪರ ಭೇಟಿಯಾಗುವ ಜಾಗವೂ ಆಗಿದೆ. ನಂತರದ ದಾಂಪತ್ಯಕ್ಕೆ ಅವು ದಾರಿ ಮಾಡಿಕೊಟ್ಟಿರುವುದುಂಟು. ಜಾತ್ರೆಗಳು ಜನತೆಯ ಹಿರಿಮೆ ಗರಿಮೆಗಳನ್ನು ಎತ್ತಿ ಹಿಡಿದಿವೆ. ಅವರ ಆಸೆ–ಆಕಾಂಕ್ಷೆಗಳನ್ನು ಈಡೇರಿಸಿವೆ. ಅವರ ಬದುಕಿನ ಅಭಿವೃದ್ಧಿಗೆ ಚಾಲನೆ ಕೊಟ್ಟಿವೆ. ಇವೆಲ್ಲದರ ಜೊತೆಗೆ ಮೂಢ ನಂಬಿಕೆ, ಧಾರ್ಮಿಕ ಅಂಧಶ್ರದ್ಧೆ, ಕುರುಡು ಸಂಪ್ರದಾಯ, ಜೂಜಾಟ, ಸೂಳೆಗಾರಿಕೆ, ಮೊದಲಾದ ಕೆಟ್ಟ ಪರಂಪರೆಗೂ ಸ್ವಲ್ಪ ಮಟ್ಟಿಗೆ ಜಾಗ ಮಾಡಿಕೊಟ್ಟಿವೆ ಎಂಬುದನ್ನು ಮರೆಯುವಂತಿಲ್ಲ.

ಇದೆಲ್ಲಾ ಏನೇ ಇರಲಿ ಒಂದರ ಹಿಂದೆ ಒಂದು ಹಬ್ಬ, ಉತ್ಸವ, ಮರಳಿ ಮರಳಿ ಬರುತ್ತಿರುವಾಗ ಜೀವನ ಎಂದೂ ಬರಡಾಗದು, ದುರ್ಭರವಾಗದು, ಪ್ರತಿಯೊಂದು ಧರ್ಮ, ಸಮಾಜ ಇವನ್ನು ರೂಢಿಸುವಾಗ ಈ ಅಂಶವನ್ನು ಮುಖ್ಯವಾಗಿ ಗಮನಿಸಿದ್ದಿರಬೇಕು. ಮತ ಧರ್ಮದ ವಿಶಾಲ ನೆಲೆಯಲ್ಲಿ ಊರಿರುವ ಸಮಾಜ ಪ್ರಾದೇಶಿಕವಾಗಿ ಇಂಥವುಗಳಿಗೆ ಅಭಿವ್ಯಕ್ತಿ ಕೊಡುವಾಗ ತನ್ನತನವನ್ನು ಒಟ್ಟಿನಲ್ಲಿ ಸಂಗತಗೊಳಿಸುವುದು ಎಲ್ಲೆಡೆಯಲ್ಲೂ ಸಾಮಾನ್ಯವಾಗಿದೆ. ಹಬ್ಬ ಉತ್ಸವಗಳ ಸಂದರ್ಭದ ಲವಲವಿಕೆ ಹಸಿರಾಗಿ ಉಳಿಯುವುದಾದರೆ 'ಸ್ವರ್ಗಕ್ಕೆ ಕಿಚ್ಚು ಹಚ್ಚು' ಎನ್ನಬಾರದೆ?

## ೨. ಜಾತ್ರೆಯ ವಿವಿಧ ಮುಖಗಳು

ಜಾತ್ರೆಗಳು ಎಲ್ಲಾ ದೇಶ–ಜನಾಂಗದವರಲ್ಲೂ ಪ್ರಚಲಿತದಲ್ಲಿದ್ದು, ತಮ್ಮದೇ ಆದ ಪ್ರಾದೇಶಿಕ ವೈಶಿಷ್ಟ್ಯಗಳಿಂದ ಕೂಡಿರುತ್ತವೆ. ಗಂಡು ದೇವರ ಜಾತ್ರೆಗಳೇ ಹೆಚ್ಚಾಗಿರುವ

ಶಿಷ್ಟ ಮತ್ತು ಹೆಣ್ಣು ದೇವರುಗಳ ಪ್ರಭಾವವೇ ಹೆಚ್ಚಾಗಿರುವ ಗ್ರಾಮೀಣ ದೇವರುಗಳ ಜಾತ್ರೆಗಳು ಜೊತೆಗೆ ಜಾನುವಾರು ಜಾತ್ರೆಗಳು ಮತ್ತು ಇತರ ಜಾತ್ರೆಗಳು ಹಲವು ಮುಖಗಳಲ್ಲಿ ಪ್ರಕಟಗೊಳ್ಳುತ್ತವೆ.

"ಜಾತ್ರೆಗೆ ಆರ್ಥಿಕ, ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಮುಖಗಳಿವೆ." ಎಂದು ಹಂಪನಾರವರು ಕರ್ನಾಟಕ ಜಾತ್ರೆಗಳು ಎಂಬ ಪುಸ್ತಕದಲ್ಲಿ ಜಾತ್ರೆಯ ವಿವಿಧ ಮುಖಗಳ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ.

ಎನ್.ಆರ್.ನಾಯಕ್‌ರವರು ಕರ್ನಾಟಕ ಜಾತ್ರೆಗಳು ಕೃತಿಯ ೧೬೧ನೇ ಪುಟದಲ್ಲಿ "ಜಾತ್ರೆಗಳ ಸ್ವರೂಪ" ಎಂಬ ಲೇಖನದಲ್ಲಿ ಆರ್ಥಿಕ, ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಮುಖಗಳ ಜೊತೆಗೆ ಕಲೆ, ಕೈಗಾರಿಕ ಮುಖ, ಅನಿಷ್ಟ ಮುಖ ಎಂಬ ಇನ್ನೆರಡು ಮುಖಗಳನ್ನು ಪರಿಚಯಿಸಿದ್ದಾರೆ. ಇವುಗಳ ಜೊತೆಗೆ ಪ್ರಮುಖವಾಗಿ ಜಾತ್ರೆಗಳಿಗಿರುವ ಪೌರಾಣಿಕ ಮುಖ ಸೇರ್ಪಡೆಗೊಳಿಸುವುದು ಉಚಿತವೆನಿಸುತ್ತದೆ. ಒಟ್ಟಿನಲ್ಲಿ ಹಲವು ಉದ್ದೇಶಗಳನ್ನು ಹೊಂದಿರುವ ಜಾತ್ರೆಗಳ ವಿವಿಧ ಮುಖಗಳನ್ನು ಹೀಗೆ ಹೇಳಬಹುದಾಗಿದೆ:

೧) ಪೌರಾಣಿಕ ಮುಖ

೨) ಧಾರ್ಮಿಕ ಮುಖ

೩) ಸಾಮಾಜಿಕ ಮುಖ

೪) ಸಾಂಸ್ಕೃತಿಕ ಮುಖ

೫) ಕಲೆ–ಕೈಗಾರಿಕಾ ಮುಖ

೬) ವ್ಯವಹಾರಿಕ ಮುಖ

೭) ಅನಿಷ್ಟ ಮುಖ

೧. **ಪೌರಾಣಿಕ ಮುಖ:** ಪ್ರತಿಯೊಂದು ದೇವತೆಯ ಜಾತ್ರೆಯ ಹಿಂದೆ ಒಂದು ಪುರಾಣದ ಕಥೆ ಅಥವಾ ಪೌರಾಣಿಕ ಸಂಗತಿಯನ್ನು ಸೃಷ್ಟಿಸಿರುವುದು ಕಂಡುಬರುತ್ತದೆ. ದೇವತೆಗೆ ಪೌರಾಣಿಕ ಸಂಬಂಧ ಇದ್ದಾಗಲೇ ಭ್ರಾಮಕ ಜನರು ಭಯ–ಭಕ್ತಿಗಳಿಂದ ಸಾವಿರಾರು ಸಂಖ್ಯೆಯಲ್ಲಿ ಪಾಲ್ಗೊಳ್ಳುತ್ತಾರೆ. ಇಂತಹ ಸ್ಥಳಗಳಲ್ಲಿ ಪೂಜೆ, ಉತ್ಸವ, ಜಾತ್ರೆ, ಮಾಡುವವರಿಗೆ ಪಾಲ್ಗೊಳುವವರಿಗೆ ಪುಣ್ಯಪ್ರಾಪ್ತಿಯಾಗುವುದೆಂದು ಪ್ರಚಾರ ಮಾಡಿರುವುದೂ ಜನರಲ್ಲಿ ಆಸಕ್ತಿಯನ್ನುಂಟು ಮಾಡಿದೆ. ಪ್ರತಿಯೊಂದು ಊರು ಅಥವಾ ಜಾತ್ರೆಗಳಿಗೆ ರಾಮ, ಲಕ್ಷ್ಮಣ, ಸೀತೆ, ಪಾಂಡವರು ಬಂದು ಹೋಗಿರುವರೆಂದು ಹೇಳಿಕೊಂಡು ಅಂತಹ ಸ್ಥಳಗಳನ್ನು ಪುಣ್ಯಕ್ಷೇತ್ರಗಳನ್ನಾಗಿ ಮಾಡಿರುವುದು ಸ್ಪಷ್ಟ.

೨. **ಧಾರ್ಮಿಕ ಮುಖ:** ಆದಿಮಕಾಲದಿಂದಲೂ ಬದುಕಿನಲ್ಲಿ ಏನಾದರೂ ಅಹಿತವಾದದ್ದು ಸಂಭವಿಸಿದರೆ ಅನಾಹುತ ಘಟಿಸಿದರೆ ಅದಕ್ಕೆಲ್ಲಾ ಕಾಣದ ಕೈಯಾದ ದೈವ ಕಾರಣವೆಂದು ಜನ ಭಾವಿಸುತ್ತಿದ್ದರು. ಈಗಲೂ ಮನುಷ್ಯ ತನ್ನ ಕೈ ಮೀರಿದ ಕಾರ್ಯಗಳಿಗೆ, ಅವುಗಳ ಸಾಧನೆಗೆ ದೇವರ ಮೇಲೆ ಭಾರ ಹಾಕುವುದನ್ನು ಕಾಣುತ್ತೇವೆ. ಅದಲ್ಲದೆ ಇಷ್ಟದೇವತೆಯನ್ನು ಸಂತೃಪ್ತಗೊಳಿಸುವುದರಿಂದ ತಮ್ಮ ಇಷ್ಟಾರ್ಥ ಸಿದ್ಧಿಸುತ್ತದೆಂಬ ನಂಬಿಕೆ ಮಾನವರಲ್ಲಿ ಬಲವಾಗಿ ಬೇರೂರಿರುವುದರಿಂದ ಜಾತ್ರಾ ಸಮಯದಲ್ಲಿ ಮಿಂದು, ಮಡಿಯುಟ್ಟು, ವ್ರತನಿಯಮಗಳನ್ನಾಚರಿಸಿ ಇಷ್ಟ ದೇವರ ದರ್ಶನ ಪಡೆದು, ಹೂ ಹಣ್ಣು, ಕಾಯಿ ನೀಡುವುದು, ಕೋಳಿಕುರಿಗಳ ಹರಕೆ ಒಪ್ಪಿಸುವುದು, ಕಾಣಿಕೆ ನೀಡುವುದು ಮುಂತಾಗಿ ನಡೆದುಕೊಳ್ಳುತ್ತಾರೆ. ತಮ್ಮ ಕೋರಿಕೆಯ ಈಡೇರಿಕೆಗಾಗಿ ಮಳೆ, ಬೆಳೆಗಳ ಸಮೃದ್ಧಿಗಾಗಿ ತಮ್ಮ ಉದ್ಯೋಗಗಳು ಹೆಚ್ಚು ಲಾಭದಾಯಕವಾಗಿಸಲು ಇಂದಿನ ವೈಜ್ಞಾನಿಕ ಯುಗದಲ್ಲಿ ದೇವರು ಮೈಮೇಲೆ ಬಂದಿರುವನೆಂದು ಹೇಳಿಕೊಳ್ಳುವವರ ಬಳಿ ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕೇಳುವ ವಿದ್ಯಾವಂತ ಜನರಿದ್ದಾರೆ, ಕರ್ನಾಟಕದ ಪ್ರತಿಯೊಂದು ಹಳ್ಳಿಯಲ್ಲಿ ಒಂದಿಲ್ಲೊಂದು ಅಮ್ಮಂದಿರ ಉತ್ಸವ ಮತ್ತಿತರ ವಿಧಿಯಾಚರಣೆಗಳು ನಡೆಯುತ್ತಲೇ ಬಂದಿರವುದರಿಂದ ಧಾರ್ಮಿಕತೆ ಪ್ರತಿಯೊಬ್ಬರಲ್ಲೂ ರಕ್ತಗತವಾಗಿ ಬಿಟ್ಟಿದೆ. ಜಾತ್ರೆ ಸಮಯಗಳಲ್ಲಿ ಈ ಧಾರ್ಮಿಕ ಭಾವನೆ ಜಾತ್ರೆಯ ಆಚರಣೆಗಳ ವಿಧಿ–ವಿಧಾನಗಳಲ್ಲಿ ಪ್ರಕಟಗೊಳ್ಳುತ್ತವೆ.

೩. **ಸಾಮಾಜಿಕ ಮುಖ:** ಜಾತ್ರೆಗಳಲ್ಲಿ ಆಯಾ ಗ್ರಾಮದ ಜನರಲ್ಲಿದೆ ಸುತ್ತಮುತ್ತಲ ಗ್ರಾಮದ ಅನೇಕ ಮಂದಿ ನೆರೆಯುವುದರಿಂದಾಗಿ ಅವು ಪ್ರಾದೇಶಿಕ ಮಟ್ಟದ ವ್ಯಾಪ್ತಿಯನ್ನು ಪಡೆದುಕೊಂಡು ಒಂದೊಂದು ಜಾತ್ರೆಯ ಪ್ರಮುಖ ದೇವತೆ, ಪ್ರದೇಶ ದೇವತೆಯಾಗಿ ಪ್ರಭಾವ ಬೀರುವುದರಿಂದ ತೇರೆಳೆಯುವ ಸಂದರ್ಭದಲ್ಲಿ ಎಲ್ಲಾ ಪಂಗಡಗಳವರೂ ಭಾಗಿಗಳಾಗುತ್ತಾರೆ. ಗ್ರಾಮೀಣರ ತಂಟೆ–ತಕರಾರುಗಳ ನಿವಾರಣೆಗೆ ದೇವಾಲಯಗಳನ್ನು ನ್ಯಾಯಾಲಯಗಳನ್ನಗಿಸಿಕೊಂಡು ಅವರ ಸಮಸ್ಯೆಗಳಿಗೆ ದೇವರ ಸಮ್ಮುಖದಲ್ಲಿ ಪರಿಹಾರ ಸಿಗುವಂತೆ ಮಾಡಿ ಅವರಿಗೆ ಜಾತ್ರಾ ಸಮಯದಲ್ಲಿ ಉತ್ಸವಾದಿಗಳನ್ನು ನೆರವೇರಿಸಿಕೊಡುವ ಜವಬ್ದಾರಿಗಳನ್ನು ವಹಿಸಲಾಗುತ್ತದೆ.

ಗ್ರಾಮದ ಒಗ್ಗಟ್ಟು ಸಮಗ್ರತೆ, ಅಭಿಮಾನ ಜಾತ್ರೆಗಳಲ್ಲಿ ಜಾಗೃತವಾಗುತ್ತದೆ. ಜಾತ್ರೆಗಳು ಅಬಾಲವೃದ್ಧರಾದಿಯಾಗಿ ಎಲ್ಲರ ಮೇಲೂ ಪರಿಣಾಮವನ್ನುಂಟು ಮಾಡುತ್ತವೆ. ಜಾತ್ರೆಯ ನೆಪದಿಂದ ಬಂಧು–ಬಾಂಧವರು ಇಷ್ಟ ಮಿತ್ರರು ಒಟ್ಟಿಗೆ ಸೇರಿ

ಪರಸ್ಪರ ಕಷ್ಟ ಸುಖಗಳನ್ನು ಹಂಚಿಕೊಳ್ಳಲು ಹೊಸಬರ ಜೊತೆಯಲ್ಲಿ ಸ್ನೇಹ ಸೌಹಾರ್ದತೆ ಬೆಳೆಯಲು ಜಾತ್ರೆ ಅನುಕೂಲ ವಾತಾವರಣವನ್ನು ಕಲ್ಪಿಸುತ್ತದೆ.

೪. **ಸಾಂಸ್ಕೃತಿಕ ಮುಖ:** ಜಾತ್ರೆಗಳು ಸಾಂಸ್ಕೃತಿಕ ಮೌಲ್ಯಗಳ ಪುನರ್‌ಸ್ಥಾಪನೆ =ಗೆ ಪ್ರಯತ್ನ ಪಡುತ್ತವೆ. ಜಾತ್ರೆಗಳಲ್ಲಿ ಆಚರಣೆಗಳು ಹೀಗೆಯೇ ನಡೆಯಬೇಕು. ಇಂಥವರೇ ಸೇವೆ ಸಲ್ಲಿಸಬೇಕು ಎಂಬ ನಿರ್ಬಂಧಗಳ ಹಿನ್ನೆಲೆಯಲ್ಲಿ ಅಂದಿನ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಹಾಗೆಯೇ ಉಳಿಸಿಕೊಂಡು ಮುಂದಿನ ತಲೆಮಾರಿಗೆ ಸಾಗಿಸುವ ಕಾರ್ಯವನ್ನು ಕಾಣಬಹುದು. ಜಾತ್ರೆಗಳಲ್ಲಿನ ಮನರಂಜನೆ ಕಾರ್ಯಕ್ರಮಗಳು ಕಲಾಪ್ರದರ್ಶನಗಳು, ಸಾಮಾಜಿಕ ಸಂಘಟನೆಗಳು, ಧಾರ್ಮಿಕ ಆಚರಣೆಗಳು ಮುಂತಾದ ಬಹುಮುಖ ಲಕ್ಷಣಗಳಿಂದಾಗಿ ಜಾತ್ರೆಗಳಿಗೆ ಸಾಂಸ್ಕೃತಿಕ ಮಹತ್ವ ಲಭಿಸಿದೆ. ಜಾತ್ರೆಗಳ ಬೀಜಾಶಯಗಳು, ಕ್ರಿಯಾವಿಧಾನಗಳು, ಆಚರಣೆಗಳು, ಅಸಾಂಗತ್ಯ ಮೌಢ್ಯಗಳು, ಸಾದೃಶ್ಯ-ವೈದೃಶ್ಯಗಳು ಇವುಗಳ ವೈಶಿಷ್ಟ್ಯಗಳು ಜಾತ್ರೆಗಳ ಸಾಂಸ್ಕೃತಿಕ ಮುಖವನ್ನು ಸ್ಪಷ್ಟಪಡಿಸುತ್ತವೆ.

೫. **ಕಲೆ-ಕೈಗಾರಿಕಾ ಮುಖ:** ಜಾತ್ರೆಗಳು ಕಲಾ ಪ್ರದರ್ಶನಕ್ಕೆ ಅವಕಾಶ ಮಾಡಿಕೊಟ್ಟು ಅವರ ಉಪಜೀವನಕ್ಕೆ ಮಾರ್ಗದರ್ಶಿಗಳೂ ಆಗಿವೆ. ಜನರು ಜಾತ್ರೆಗಳಲ್ಲಿ ಹಾಡು, ಕುಣಿತ, ಇಂದ್ರಜಾಲ, ಮಹೇಂದ್ರಜಾಲ, ದೊಂಬರಾಟ, ಬಯಲಾಟ ಮೊದಲಾದ ಕಲಾ ಪ್ರದರ್ಶನಗಳನ್ನು ಕಂಡು ಆನಂದಿಸುತ್ತಿದ್ದರು. ಜಾತ್ರೆಗಳಲ್ಲಿ ಹೆಚ್ಚಾಗಿ ಶಕ್ತಿ-ಯುಕ್ತಿ ಪ್ರದರ್ಶನಗಳಿಗೆ ಅವಕಾಶ ನೀಡುತ್ತದೆ.

ಹೊಟ್ಟೆ ಪಾಡಿಗಾಗಿ ಪ್ರದರ್ಶಿಸಲ್ಪಡುವ ಕಲೆಗಳಿಗಿಂತ ಜಾತ್ರೆಗೆ ಆಗಮಿಸುವವರಿಗೆ ಆನಂದವನ್ನು ಉಂಟು ಮಾಡಿದರೆ ಪ್ರದರ್ಶಿಸುವವರ ಜೀವನ ನಿಶ್ಚಿಂತೆಯಿಂದ ಸಾಗುತ್ತದೆ. ವಿವಿಧ ವೃತಿಗಾಯಕ ಮೇಳಗಳು ಹವ್ಯಾಸ ಕಲಾ ತಂಡಗಳು ಉತ್ಸಾಹ ಆಸಕ್ತಿಗಳನ್ನು ಉಳಿಸಿಕೊಂಡು ಬರಲು ಜಾತ್ರೆಗಳು ಸಹಾಯಕವಾಗಿವೆ. ಈ ಎಲ್ಲಾ ಬಗೆಯ ಕಲೆಗಳು ಅನಾದಿಕಾಲದಿಂದ ಸಂವಹನ ಗೊಳ್ಳುತ್ತಾ ಬಂದ ವಿವಿಧ ಗುಂಪುಗಳ ವಿಶಿಷ್ಟ ಸಾಂಸ್ಕೃತಿಕ ಸಂಗತಿಗಳಾಗಿವೆ.

೬. **ವ್ಯಾವಹಾರಿಕ ಮುಖ:** ಜಾತ್ರೆಗಳು ಗ್ರಾಮೀಣರು ಬೆಳೆದ ದವಸ ಧಾನ್ಯಗಳ ಕ್ರಯವಿಕ್ರಯಗಳಿಗೆ ಪ್ರಮುಖ ಕೇಂದ್ರಗಳಾಗಿದ್ದವು. ಮೊದಲಿಗೆ ವಸ್ತು ವಿನಿಮಯ ರೂಪದಲ್ಲಿದ್ದ ವ್ಯವಹಾರ ಕ್ರಮೇಶ ಹಣಕಾಸಿನ ವ್ಯವಹಾರಕ್ಕೆ ದಾರಿ ಮಾಡಿಕೊಟ್ಟಿದೆ. ಅನೇಕ ಊರುಗಳಿಂದ ಜನಸಾಗರ ಹರಿದು ಬರುವುದರಿಂದ ಜಾತ್ರೆಗಳಲ್ಲಿ ವ್ಯಾಪಾರ ವ್ಯವಹಾರಗಳು ಚುರುಕಾಗಿ ನಡೆಯುತ್ತವೆ.

ಜಾತ್ರೆಯ ನೆಪದಲ್ಲಿ ಗ್ರಾಮೀಣರಿಗೆ ನಿತ್ಯ ಜೀವನಕ್ಕೆ ಅಗತ್ಯವಾದ ಬಟ್ಟೆ-ಬರೆ, ದಿನಸಿ ವಸ್ತು, ವಡವೆಗಳನ್ನು ಕೊಳ್ಳುವುದಕ್ಕೂ ವ್ಯಾಪಾರ ವ್ಯವಹಾರಸ್ಥರ ಆರ್ಥಿಕ ಸ್ಥಿತಿ ಉತ್ತಮಗೊಳ್ಳುವುದಕ್ಕೂ ಮಾರಾಟ ತೆರಿಗೆಯ ಮೂಲಕ ಸರ್ಕಾರಕ್ಕೆ ಹೆಚ್ಚಿನ ಆದಾಯ ಸಂದಾಯವಾಗುವುದಕ್ಕೂ ಅನುಕೂಲವಾಗಿದೆ. ಆದ್ದರಿಂದ ಜಾತ್ರೆಗಳಲ್ಲಿ ವ್ಯಾಪಾರ ವ್ಯವಹಾರಗಳೇ ಪ್ರಮುಖ ಪಾತ್ರವಹಿಸುತ್ತಿದ್ದವು. ಕ್ರಮೇಣ ಕಾಲಕಾಲಕ್ಕೆ ಪರಿಷ್ಕಾರಗೊಳ್ಳುತ್ತಾ ಬರುತ್ತಿದ್ದಂತೆ ವ್ಯಾಪಾರಕ್ಕೆ ಆಧಾರವಾಗಿದ್ದಂತವು ನಾಡಿನ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಪ್ರಗತಿಯ ಮುಖ್ಯ ಕೇಂದ್ರ ಬಿಂದುಗಳಾಗಿ ಕಾರ್ಯ ನಿರ್ವಹಿಸುತ್ತಿವೆ.

೭. **ಅನಿಷ್ಟ ಮುಖ:** ಜಾತ್ರೆಗಳು ಗ್ರಾಮೀಣರಿಗೆ ತಮ್ಮ ಆಶೋತ್ತರಗಳನ್ನು ಪೂರೈಸಿಕೊಳ್ಳಲು ಸಂತೋಷಿಗಳಾಗಲು, ಅನುಕೂಲವಾಗಿದ್ದರು ಧಾರ್ಮಿಕ ಅಂಧಶ್ರದ್ಧೆ, ಕುರುಡು ಸಂಪ್ರದಾಯಗಳು, ಮೂಢನಂಬಿಕೆಗಳು, ಜೂಜುಗಾರಿಕೆ, ಸೂಳೆಗಾರಿಕೆ, ಕಳ್ಳತನ, ಮೋಸ, ವಂಚನೆ ಮುಂತಾದ ಸಾಮಾಜಿಕ ಅನಿಷ್ಟಗಳಿಗೆ ಕಾರನೀಭೂತಗಳಾಗಿವೆ. ಜಾತ್ರೆಗಳಲ್ಲಿ ಕಂಡುಬರುವ ದೇವದೇವತೆಗಳ ಆರಾಧನೆ ಮತ್ತು ಅವುಗಳ ವೈಭವಯುತ ಮೆರವಣಿಗೆಗಳಿಗೆ ಸಮಯ ಮತ್ತು ಹಣದ ವ್ಯಯ ಹಿಂದಿನವರು ಆಚರಿಸಿಕೊಂಡು ಬರುತ್ತಿದ್ದರೆಂಬ ಒಂದೇ ಕಾರಣಕ್ಕಾಗಿ ಇಂದೂ ಮುಂದುವರೆಸಿಕೊಂಡು ಹೋಗುತ್ತಿರುವ ಕೆಲವು ಆಚರಣೆಗಳು, ವಿಚಾರ ಮಾಡದೆ ಕುರುಡು ನಂಬಿಕೆಯನ್ನು ಅನುಸರಿಕೊಂಡು ಹೋಗುತ್ತಿರುವ ವಿಧಿ-ವಿಧಾನಗಳು ಸಾಮಾಜಿಕ ಉನ್ನತಿಗೆ ತೊಡಕುಗಳಾಗಿವೆ. ಯಜಮಾನಿ ಸಂಸ್ಕೃತಿಯ ಪ್ರಭಾವ ಕಂಡು ಬರುವ ದೇವತೆಗಳ ಜಾತ್ರೆಗಳು ಪ್ರಾಣಿಬಲಿ ಮುಂತಾದ ಕ್ರೂರ -ಆಚರಣೆಗಳು ಅವಾಸಸ್ಥಾನವಾಗಿರುವ ಗ್ರಾಮೀಣ ದೇವತೆಗಳ ಜಾತ್ರೆಗಳು ಸಾಮಾಜಿಕ ಜೀವನಕ್ಕೆ ಸವಾಲಾಗಿವೆ. ಇದಲ್ಲದೇ ಜಾತ್ರೆಗಳಲ್ಲಿ ಪರಸ್ಪರ ನೈರ್ಮಲ್ಯವನ್ನು ಕಾಪಾಡಿಕೊಂಡು ಬರುವುದು ತುಂಬಾ ತ್ರಾಸದಾಯಕ ಕೆಲಸವಾದ್ದರಿಂದ ಎಷ್ಟೇ ಜಾಗ್ರತೆ ವಹಿಸಿದರೂ ಸಾಂಕ್ರಾಮಿಕ ರೋಗಗಳು ಹರಡುವ ಸಾಧ್ಯತೆಗಳು ಹೆಚ್ಚಾಗಿರುತ್ತದೆ.

ಹೀಗೆ ಜಾತ್ರೆಗಳು ಹಲವು ಮುಖಗಳನ್ನು ಹೊಂದಿದ್ದು, ವೈವಿಧ್ಯ ಪೂರ್ಣವಾಗಿವೆ. ಸಾಮಾಜಿಕ ವ್ಯತ್ಯಾಸಗಳು ಹಾಗೂ ಬಲದಾದ ಜೀವನ ಮೌಲ್ಯಗಳು ಇಂದು ಜಾತ್ರೆಗಳ ಸ್ವರೂಪದಲ್ಲಿ ಕೆಲವು ಬದಲಾವಣೆಗಳನ್ನು ಮಾಡುತ್ತಿದ್ದರು. ಅವು ತಮ್ಮ ಮೂಲ ಸತ್ವವನ್ನು ಕಸಿದುಕೊಳ್ಳದೆ ಹೊಸತನವನ್ನು ಮೈಗೂಡಿಸಿಕೊಂಡು ಬರಲೆತ್ನಿಸುತ್ತಿದ್ದರು. ಮಾನವನ ಅಸಡ್ಡೆಯಿಂದಾಗಿ ಕೆಲವು ಜಾತ್ರೆಗಳು ಕಣ್ಮರೆ-ಯಾಗುತ್ತಿವೆ. ಸಾಮಾಜಿಕ ಒಗ್ಗಟ್ಟಿನ ಕೊರತೆ, ಹೊಲಸು ರಾಜಕೀಯಗಳು ಹಳ್ಳಿಗಳನ್ನು ಪ್ರವೇಶಿಸಿ ಇಂದು ಜಾತ್ರೆಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತಿವೆ.

# ಅಧ್ಯಾಯ – ೪

# ಎಡತೊರೆಯ ಶ್ರೀ ಅರ್ಕೇಶ್ವರ ಜಾತ್ರಾಮಹೋತ್ಸವ

## ಸ್ಥಳನಾಮ

ಮೈಸೂರು ಜಿಲ್ಲೆಯ ತಾಲ್ಲೂಕು ಕೇಂದ್ರವಾದ 'ಕೃಷ್ಣರಾಜನಗರ'ಕ್ಕೆ ಮೊದಲಿದ್ದ ಹೆಸರೇ 'ಎಡತೊರೆ' ಎಂಬುದು. ಈ ಹೆಸರು ಬರಲು ಕಾರಣವನ್ನು ತಿಳಿಯಲು ಹೊರಟಾಗ ಸುಮಾರು ವರ್ಷಗಳ ಹಿಂದೆ ಕಾವೇರಿ ನದಿಯ ಬಲಭಾಗದ ತೀರದಲ್ಲಿ ಜನರು ವಾಸಿಸುತ್ತಿದ್ದರು. ಅವರು ವಾಸಿಸುತ್ತಿದ್ದ ಎಡಭಾಗದಲ್ಲಿ ಕಾವೇರಿ ನದಿ ಹರಿಯುತ್ತಿದ್ದ ಕಾರಣದಿಂದಾಗಿ ಆ ಊರಿಗೆ ಎಡತೊರೆ ಎಂಬುದು ಪ್ರಚಾರಕ್ಕೆ ಬಂದಿತೆಂದು ಹೇಳುತ್ತಾರೆ. ಇಲ್ಲಿ ತೊರೆ ಎಂದರೆ ನದಿ, ಹೊಳೆ ಎಂಬ ಅರ್ಥಗಳಿರುವುದನ್ನು ಕಾಣಬಹುದು.

ಸುಮಾರು ಎರಡು ಮೂರು ಶತಮಾನಗಳ ಹಿಂದೆ ಕಾವೇರಿ ನದಿಯಲ್ಲಿ ಪ್ರವಾಹ ಬಂದು ಆ ಊರನ್ನೆಲ್ಲಾ ಕೊಚ್ಚಿಕೊಂಡು ಹೋಯಿತು. ಹಾಗಾಗಿ ಅಲ್ಲಿನ ಜನರೆಲ್ಲಾ ಕಂಗಲಾಗಿ ಆ ನದಿಯ ತಟೆಯಿಂದ ತಮ್ಮ ವಸತಿಗಳನ್ನು ತೊರೆದು ಅಲ್ಲಿಗೆ ೨ ಕಿ.ಮೀ.ಗಳಷ್ಟು ದೂರಕ್ಕೆ ಬಂದು ತಮ್ಮ ವಸತಿಗಳನ್ನು ನಿರ್ಮಾಣ ಮಾಡಿಕೊಂಡರು. ಮೈಸೂರು ಅರಸರು ಆಳುತ್ತಿದ್ದ ಕಾಲವದು. ಮೈಸೂರು ಸಾಮ್ರಾಜ್ಯದ ಪ್ರಮುಖ ಪಟ್ಟಣವಾಗಿ ಅಭಿವೃದ್ಧಿಪಡಿಸಿದರು. ಅದರ ಜ್ಞಾಪಕಾರ್ಥವಾಗಿ ಅವರು ೧೯೨೪ರಲ್ಲಿ ಎಡತೋರೆಗೆ ಪುನರ್ನಾಮಕರಣ ಮಾಡಿ ಕೃಷ್ಣರಾಜನಗರ ಎಂದು ಹೆಸರಿಸಿದರು. ಅಂದಿನಿಂದ 'ಎಡತೊರೆ' ಮತ್ತು 'ಕೃಷ್ಣರಾಜನಗರ' ಎಂಬ ಎರಡು ಹೆಸರುಗಳು ಬಳಕೆಯಲ್ಲಿವೆ.

## ಭೌಗೋಳಿಕ ಪರಿಸರ

ಯಾವುದೇ ಒಂದು ಪ್ರದೇಶದ ಪ್ರಾಮುಖ್ಯತೆ ಮತ್ತು ಆ ಪ್ರದೇಶವೂ ಗುರುತಿಸಿಕೊಳ್ಳುವುದು ಅದರ ಭೌಗೋಳಿಕ ಪರಿಸರದ ಹಿನ್ನೆಲೆಯಿಂದ. ಆದ್ದರಿಂದ ಭೌಗೋಳಿಕ ಪರಿಸರವೂ ಬಹಳ ಪ್ರಮುಖವಾದ ಅಂಶವಾಗಿದೆ.

ಮೈಸೂರು ಜಿಲ್ಲೆಯ ತಾಲ್ಲೂಕು ಕೇಂದ್ರವಾದ 'ಕೃಷ್ಣರಾಜನಗರ' 'ಎಡತೊರೆಯು' ಜಿಲ್ಲೆಯಲ್ಲಿ ಭತ್ತದ ಬೆಳೆಗೆ ಪ್ರಮುಖವಾಗಿದ್ದು ಮೈಸೂರು ಜಿಲ್ಲೆಯ 'ಭತ್ತದಕಣಜ' ಎಂಬ ಹೆಸರಿನ್ನು ತನ್ನದಾಗಿಸಿಕೊಂಡಿದೆ. ಕಾವೇರಿ ನದಿಯ ದಂಡೆಯಲ್ಲಿರುವ ಈ ಪ್ರದೇಶದ ಸುತ್ತ ಎಲ್ಲಿ ಕಣ್ಣಾಡಿಸಿದರೂ ಹೆಸರಿನಿಂದ ಕಂಗೊಳಿಸುವ ಪ್ರದೇಶವಿದು. ನಗರದ ಹೊರವಲಯದಲ್ಲಿ ಮಾತ್ರವಲ್ಲದೆ, ನಗರದ

ಒಳಗೆ ಪ್ರತಿ ಮನೆಯಲ್ಲೂ ತೆಂಗಿನಮರ, ಬಾಳೆಗಿಡಗಳಿದ್ದು ಆಕಾಶ ಮಾರ್ಗದಲ್ಲಿ ಈ ನಗರವನ್ನು ವೀಕ್ಷಿಸಿದರೆ ತೆಂಗಿನತೋಟದ ಹಾಗೆ ಗೋಚರಿಸುತ್ತದೆ.

'ಕೃಷ್ಣರಾಜನಗರವು' ಎಲ್ಲಾ ಧರ್ಮದ ಜಾತಿಯ ಜನರನ್ನು ಒಳಗೊಂಡಿದ್ದು, ಪ್ರಮುಖ ಸಂಸ್ಕೃತಿ ಕೇಂದ್ರಿತನಗರವಾಗಿದೆ. ಈ ಊರಿನ ಪೂರ್ವದ ಕಾವೇರಿ ನದಿಯ ತೀರದಲ್ಲಿ ಶ್ರೀ ಅರ್ಕೇಶ್ವರಸ್ವಾಮಿ ದೇವಾಲಯವಿದ್ದು, ಪುರಾಣ ಪ್ರಸಿದ್ಧ ಐತಿಹ್ಯವಿರುವ ಕ್ಷೇತ್ರವಾಗಿದೆ. ಕೃಷ್ಣರಾಜನಗರವು ಸುತ್ತಲು ಗದ್ದೆ ಬಯಲು ಮತ್ತು ಹಲವು ವಿವಿಧ ಮರಗಳನ್ನು ಹೊಂದಿದ್ದು ಹಸುರಿನಿಂದ ಆವೃತವಾಗಿದ್ದು ನೋಡಲು ನಯನ ಮನೋಹರವಾಗಿದೆ.

**ಶ್ರೀ ಅರ್ಕೇಶ್ವರ ದೇವಾಲಯ ನಿರ್ಮಾಣದ ಐತಿಹಾಸಿಕ ಹಿನ್ನೆಲೆ:**

ಭಾರತೀಯರಲ್ಲಿ ಪ್ರಮುಖವಾಗಿ ಹಿಂದೂಗಳಲ್ಲಿ ಒಂದು ವಿಶಿಷ್ಟವಾದ ಸ್ಥಾನ ಗಳಿಸಿದೆ. ಪುರಾಣವು ಶತಶತಮಾನಗಳಿಂದಲೂ ಮಾನವನ ದಿನನಿತ್ಯ ಜೀವನದ ಮೇಲೆ ಪ್ರಭಾವ ಬೀರುತ್ತಾ ಬಂದಿದೆ. ಧರ್ಮ, ತತ್ವಶಾಸ್ತ್ರ, ಜಾನಪದ, ವಿಜ್ಞಾನ, ಸಾಹಿತ್ಯ, ಚರಿತ್ರೆಗೆ ಸಾಮಗ್ರಿಗಳನ್ನು ಒದಗಿಸುವ ಆಗರವಾಗಿದೆ. ದಾನ, ವ್ರತಸ್ಥಳ, ಪುರಾಣಗಳು, ಶ್ರಾದ್ಧ ಮುಂತಾದವುಗಳನ್ನು ಪುರಾಣಗಳು ತಿಳಿಸಿಕೊಡುತ್ತವೆ. ಬ್ರಹ್ಮ, ವಿಷ್ಣು, ಸೂರ್ಯ ಹಾಗೂ ರುದ್ರರ ವರ್ಣನೆಗಳನ್ನು ಸಹ ಹೇಳುತ್ತವೆ. ದೇವಾಲಯದ ಬಗೆಗಿನ ಮಾಹಿತಿಯನ್ನು ಪದ್ಮ, ಸ್ಕಂದ ಮತ್ತು ಭವಿಷ್ಯೋತ್ತರ ಪುರಾಣ ಅರ್ಕ ಪುಷ್ಕರಣಿ ಪುರಾಣ ಮುಂತಾದವುಗಳಲ್ಲಿ ಕಾಣುತ್ತೇವೆ.

ಸೂರ್ಯೋಪಾಸನೆಯು ಪ್ರಾಚೀನವಾದದ್ದು, ಈಜಿಪ್ಟ್‌ನಲ್ಲೂ ಸೂರ್ಯ-ಪೂಜೆಯ ನಿದರ್ಶನಗಳು ದೊರೆಯುತ್ತದೆ. ಪುಣ್ಯ ಪುರುಷಕ್ಷೇತ್ರ ನದಿ ಪುಷ್ಕರಣಿಗಳ ಹಿರಿಮೆ ಸಾರುವ ಕೃತಿಗಳು, ಕತೆಗಳು ಎಲ್ಲ ಧರ್ಮಗಳಲ್ಲೂ ಇವೆ. ಜೀವನ ನಿರ್ವಹಣೆಗೆ ಬೆಳಕು ಮೂಲ ಶಕ್ತಿಯಾಗಿರುವುದರಿಂದ ಸೂರ್ಯೋಪಾಸನೆ ಪ್ರಾರಂಭ-ಗೊಂಡಿರಬೇಕು. ಕರ್ನಾಟಕದಲ್ಲಿ ಒಂಭತ್ತನೆಯ ಶತಮಾನಕ್ಕೆ ಮೊದಲಿಂದಲೂ ಸೂರ್ಯ ಉಪಾಸನೆ ಇರುವುದು ಕಂಡುಬರುತ್ತದೆ. ಇಂತಹ ಒಂಭತ್ತನೆಯ ಶತಮಾನದ ಗಂಗರ ಶಾಸನ ಅರ್ಕೇಶ್ವರ ದೇವಾಲಯದ ಬಳಿ ದೊರೆತಿದೆ. ಮೈಸೂರಿಗೆ ೪೮ ಕಿ.ಮೀ. ದೂರದಲ್ಲಿ (North west) ಕಾವೇರಿ ನದಿದಂಡೆಯ ಮೇಲೆ ಎಡತೊರೆ (ಕೃಷ್ಣರಾಜನಗರ) ಎಂಬ ಊರಿದೆ. ಇಲ್ಲಿ ನದಿಯು ಎಡಕ್ಕೆ ಬಾಗಿ ತಿರುಗಿರುವುದರಿಂದ ಎಡತೊರೆ ಎಂಬ ಹೆಸರು ಬರಲು ಕಾರಣವಾಯಿತೆಂದು ಹೇಳುತ್ತಾರೆ. ಸ್ನಾನದ ಘಟ್ಟ ಹಾಗೂ ಪುಷ್ಕರಣಿಯನ್ನು ಹೊಂದಿರುವ

ಶ್ರೀ ಅರ್ಕೇಶ್ವರನ ದೇವಸ್ಥಾನ ಈ ಊರಿನ ಮುಖ್ಯ ಕೇಂದ್ರಬಿಂದುವಾಗಿದೆ. ಈ ಊರು ೧೧ನೇ ಶತಮಾನದ ಅರಸನಾಗಿದ್ದ ರಾಜೇಂದ್ರ ಚೋಳನಿಂದ ಗೆದ್ದ ಪ್ರದೇಶವಾಗಿತ್ತು.

ಅರ್ಕೇಶ್ವರ ದೇವಾಲಯದ ನಿರ್ಮಾಣಕ್ಕೆ ಕಾರಣವಾದ ಪುರಾಣ ಕಥೆಯು ಈ ಕೆಳಕಂಡಂತಿದೆ.

ಸೂರ್ಯ ಮತ್ತು ಸಂಜ್ಞಾದೇವಿಯಲ್ಲಿ ಯಮನು ಮನುವು ಹಾಗೂ ಯಮುನೆ ಎಂಬ ಸೌಂದರ್ಯವತಿಯರಾದ ಉತ್ಕೃಷ್ಟ ಗುಣಗಳಿಂದ ಕೂಡಿದ ಮಕ್ಕಳು ಹುಟ್ಟಿದರು. ಅದರಲ್ಲಿ ಮೂರನೆಯವಳಾದ ಯಮುನೆಯು ರೂಪವಂತೆಯಾದ್ದರಿಂದ ಸಕಲರು ಮೋಹಪಟ್ಟರು, ಸ್ವತಃ ತಂದೆಯಾದ ಸೂರ್ಯನೇ ಆ ಕನ್ಯೆಯನ್ನು ನೋಡಿ ಇಚ್ಛಿಸಿದನು. ಇದರಿಂದ ದುರ್ನಡತೆಯುಳ್ಳವನಾದ ಸೂರ್ಯನನ್ನು ಸಮಸ್ತ ದೇವತೆಗಳು ಋಷಿಗಳು ಚಾರಣರು ಚಾರಣರುನಾಗ ಗಂಧರ್ವರು ಸ್ತ್ರೀಯರು ಯಕ್ಷರು ಮುಂತಾದ ಲೋಕದ ಜನರೆಲ್ಲಾ ನಿಂದಿಸಿದರು. ಲೋಕದ ಕತ್ತಲೆಯನ್ನು ಪರಿಹರಿಸುವವನಾದ ಸೂರ್ಯನು ತಾನೇ ಕತ್ತಲೆಗೆ ಬಿದ್ದನೆಂದು ಆಕ್ಷೇಪಿಸಿದರು. ಅನೇಕ ಪ್ರಕಾರವಾಗಿ ಸೂರ್ಯನನ್ನು ನಿಂದಿಸಿ ಶಾಪವನ್ನು ಕೊಟ್ಟರು. ಇದರಿಂದ ಸೂರ್ಯನು ಪಾಪಗ್ರಸ್ತನಾದನು. ಅನಂತರ ಸೂರ್ಯನಿಗೆ ತನ್ನ ತಪ್ಪಿನ ಅರಿವಾಗಿ ತನ್ನನ್ನು ತಾನೇ ನಿಂದಿಸಿಕೊಂಡು ತಲೆತಗ್ಗಿಸಿದನು. ತನ್ನ ಪಾಪದಿಂದ ಮುಕ್ತಿಯಾಗುವುದು. ಹೇಗೆಂದು ಯೋಚಿಸಿ, ಬಹಳ ಪಶ್ಚಾತ್ತಾಪಪಟ್ಟು ಚಿಂತಿಸಿ, ಪರಮೇಶ್ವರನ ಹೊರತಾಗಿ ತನ್ನನ್ನು ಯಾರು ರಕ್ಷಿಸರೆಂದು ತಿಳಿದು ಸಕಲಗುಣ ಸಂಪನ್ನರಾದ ಸೂರ್ಯನು ಭೂಲೋಕಕ್ಕೆ ಹೋಗಿ ತನ್ನ ಕರ್ಮವನ್ನು ಕಳೆಯಲು ನಿಶ್ಚಯಿಸಿದನು.

ಅದರಂತೆ ಸೂರ್ಯನು ಭೂಲೋಕದ ಕರ್ಮಭೂಮಿಯಾದ ಎಡತೊರೆಯಲ್ಲಿ ಪ್ರತಿಷ್ಠಾಪನೆಗೊಂಡನು. ಅಲ್ಲಿ ಸ್ನಾನಕ್ಕೋಸ್ಕರ ಸ್ವಚ್ಛವಾದ ಜಲವುಳ್ಳ ಪುಷ್ಕರಣಿಯನ್ನು ನಿರ್ಮಿಸಿದನು. ಆ ಪುಷ್ಕರಣಿಯಲ್ಲಿ ಸ್ನಾನವನ್ನು ಮಾಡಿ ಒಂದು ತಿಂಗಳೂ ಈಶ್ವರ ಪೂಜೆಯನ್ನು ಮಾಡಿದನು. ಆ ಪುಷ್ಕರದ ದಕ್ಷಿಣ ತೀರದಲ್ಲಿ ಸೂರ್ಯನು ಪ್ರತಿಷ್ಠೆ ಮಾಡಿದ ಲಿಂಗವು ಜ್ಯೋತಿಸ್ವರೂಪವಾಗಿ ಕಾಣಿಸುವುದು. ಅಲ್ಲಿ ಅನೇಕ ಅಶ್ವಮೇಧ ಕ್ರತುಗಳನ್ನು ಮಾಡಿ ಶಿವಪೂಜೆಯಿಂದ ಪರಿಶುದ್ಧನಾದ ಮೇಲೆ ಸೂರ್ಯನು ಪಾಪವಿಲ್ಲದವನಾದನು. ಈ ಕಾರಣದಿಂದ ಶಿವನ ಪ್ರೀತಿಗೋಸ್ಕರ ಆ ಶಿವಲಿಂಗದ ಪಶ್ಚಿಮ ದಿಕ್ಕಿನಲ್ಲಿ ಯಾಗಶಾಲೆಯನ್ನು ಮಾಡಿ ಅನೇಕ ಅಶ್ವಮೇಧಗಳನ್ನು ಮಾಡಿದನು. ಇದರಿಂದ ಪ್ರಸನ್ನನಾದ ಶಿವನು ಪಾರ್ವತಿ ಸಮೇತ ಪ್ರತ್ಯಕ್ಷನಾದನು. ಸೂರ್ಯನು

ಶಿವನನ್ನು ನೋಡಿ ಆನಂದಬಾಷ್ಪಗಳಿಂದಾಯುಕ್ತನಾದ ಕಣ್ಣುಗಳುಳ್ಳವನಾಗಿ, ರೋಮಾಂಚಿತನಾಗಿ ಸಂಭ್ರಮದಿಂದ ಪುಷ್ಪಗಳನ್ನು ಎರೆದನು. ಆಗ ಶಿವನು ಸಂತೋಷದಿಂದ ಸೂರ್ಯನಿಗೆ ವರವನ್ನು ನೀಡಿದನು. ಈಗ ಎಲ್ಲಾ ಕೊಳಗಳು ಕಾವೇರಿಯಲ್ಲಿ ಸೇರಿವೆ, ಸೂರ್ಯನಿಂದ ಸ್ಥಾಪಿಸಿ ಪೂಜಿಸಿದ ಲಿಂಗವೇ ಅರ್ಕೇಶ್ವರನೆಂದೂ, ಸೂರ್ಯ ಸ್ನಾನಮಾಡಿದ ಸ್ಥಳವೇ ಪುಷ್ಕರಣಿಯೆಂದೂ ಹೆಸರು ಪಡೆದಿದೆ. ಅರ್ಕ ಪುಸ್ಕರಣಿ ನೀರಿನ ಮಧ್ಯಮಂಟಪದ ಈಶಾನ್ಯ ಭಾಗಕ್ಕಿರುವ ಜಾಗ, ಇದನ್ನು ತೆಪ್ಪದ 'ಮಂಟಪ' ಎಂದು ಕರೆಯುತ್ತಾರೆ.

**ಶಾಸನಗಳ ಆಧಾರ**

ಶಾಸನಗಳು ನಮ್ಮ ಪರಂಪರೆಯ ಐತಿಹಾಸಿಕ ಹಿನ್ನೆಲೆಯ ದಾಖಲೆಗಳಾಗಿವೆ. ದೇವಾಲಯದ ಸಮೀಪ ೯ನೆಯ ಶತಮಾನದ ಗಂಗರ ಶಾಸನ ದೊರೆತಿದೆ. ಸೂರ್ಯನ ಉಪಾಸನೆ ಪ್ರಾಚೀನವಾದದ್ದೆಂದು ತಮಿಳು ಶಾಸನಗಳಲ್ಲಿ ಅಂಗೈಕಾರನ್ ಎಂಬುವನು ಈಶ್ವರ ದೇವಾಲಯಕ್ಕೆ ಭೂಮಿಯನ್ನು ದಾನ ಮಾಡಿದನೆಂದು ಹೇಳಲಾಗಿದೆ. ಹನ್ನೊಂದನೆಯ ಶತಮಾನದ ರಾಜೇಂದ್ರಚೋಳನಿಂದ ಗೆದ್ದ ಪ್ರದೇಶ ಎಡತೊರೆಯಾಗಿದ್ದು ಆ ಕಾಲದಲ್ಲಿ ಮೀನಾಕ್ಷಿ ದೇವಾಲಯ ನಿರ್ಮಿಸಿರಬಹುದೆಂದು ಎಂದು ಹೇಳಿದರೂ ಖಚಿತವಾದ ಆಧಾರವಿಲ್ಲ.

ದೇವಾಲಯವನ್ನು ನಿರ್ದಿಷ್ಟವಾದ ಕಾಲದಲ್ಲಿ ನಿರ್ಮಿಸಿದ್ದು ಎಂಬುದಕ್ಕೆ ಶಾಸನೋಲ್ಲೇಖವಿಲ್ಲ, ಚೋಳರ ಕಾಲದಲ್ಲಿ ನಿರ್ಮಾಣಗೊಂಡು, ಮೈಸೂರು ಅರಸರ ಕಾಲದಲ್ಲಿ ಅಭಿವೃದ್ಧಿಯಾಗಿದೆ ಎಂದು ತಿಳಿಯಬಹುದು.

**ಶ್ರೀ ಅರ್ಕೇಶ್ವರ ದೇವಾಲಯದ ಪರಿಚಯ**

ಕಾವೇರಿ ನದಿಯ ಬಲಭಾಗದ ದಂಡೆಯ ಮೇಲಿರುವ ಈ ದೇವಾಲಯವು ಸುತ್ತಮುತ್ತಲಿನ ರಮಣೀಯ ದೃಶ್ಯದಿಂದಾಗಿ ನೋಡಲು ಸುಮನೋಹರವಾಗಿದೆ. ಸುತ್ತಲೂ ಭತ್ತದ ಗದ್ದೆಗಳಲ್ಲಿ ಕಂಡುಬರುವ ಹಕ್ಕಿಗಳ ಚಿಲಿಪಿಲಿ ನಾದ ಎಂತಹವರನ್ನು ತನ್ನತ್ತ ಆಕರ್ಷಿಸದೇ ಇರಲಾರದು. ಇದಲ್ಲದೇ ದೇವಾಲಯದ ಸುತ್ತಲೂ ನಿರ್ಮಾನಗೊಂಡಿರುವ ಡಾಂಬರು ರಸ್ತೆ, ಅದಕ್ಕೊಂದು ಚೆಂದವನ್ನು ನೀಡಿದೆ.

ಶ್ರೀ ಅರ್ಕೇಶ್ವರಸ್ವಾಮಿ ದೇವಾಲಯದ ಪರಿಸರ ಶಾಂತತೆಯ ಪ್ರತೀಕವಾಗಿದೆ. ದೇವಾಲಯದ ಪ್ರಮುಖ ಪ್ರವೇಶದ್ವಾರವು ದಕ್ಷಿಣದಲ್ಲಿದೆ. ದೇವಾಲಯದ ಪ್ರವೇಶದ್ವಾರದ ರಾಜಗೋಪುರ ಮೈಸೂರು ಅರಸನಾದ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಿರ್ಮಾಣಗೊಂಡಿದ್ದೆಂದು ಹೇಳುತ್ತಾರೆ. ಈ ರಾಜಗೋಪುರವು

ಸುಮಾರು ೫೦ ಅಡಿಗಳಷ್ಟು ಎತ್ತವಾಗಿದ್ದು ವಿವಿಧ ದೇವಾನುದೇವತೆಗಳ ವಿಗ್ರಹಗಳಿಂದ ಕುಡಿದೆ. ಶಿವನ ವಿವಿಧ ಅವತಾರಗಳ ಮೂರ್ತಿಗಳನ್ನು ಒಳಗೊಂಡಂತೆ ನಿರ್ಮಾಣಗೊಂಡಿದೆ. ಈ ರಾಜಗೋಪುರದ ತುದಿಯಲ್ಲಿ ಪಂಚಲೋಹದ ಮೂರು ಕಳಶಗಳನ್ನೂ ಇಡಲಾಗಿದೆ.

ದೇವಾಲಯದ ಪ್ರವೇಶದ್ವಾರದ ಮುಂದೆ ಬೃಹತ್ ಗರುಡಗಂಭವಿದ್ದು, ಅದು ಸುಮಾರು ೪೦ ಅಡಿಗಳಷ್ಟು ಎತ್ತರವಾಗಿದೆ. ಇದರ ತಳಭಾಗದಲ್ಲಿ ಗಣೇಶ, ನಂದಿ, ಶಿವ ಮತ್ತು ಸೂರ್ಯ ದೇವನ ಕೆತ್ತನೆಗಳನ್ನು ನಾಲ್ಕು ಭಾಗಗಳಲ್ಲಿ ಮಾಡಲಾಗಿದೆ. ಈ ಗರುಡಗಂಭದ ಮೇಲೆ ಶಿವನ ವಾಹನವಾದ ನಂದಿಯ ಸಣ್ಣ ವಿಗ್ರಹವಿದೆ. ಒಳಪ್ರಕಾರದಲ್ಲಿ ಅಂದರೆ ಗರ್ಭಗುಡಿಯ ಮುಂದೆ ಒಂದು ಕಂಬವಿದ್ದು ಅದರಲ್ಲಿ ಸೂರ್ಯ ವಿಗ್ರಹವಿದೆ.

ದೇವಾಲಯವು ವಿಶಾಲವಾದ ಕಟ್ಟಡದಿಂದ ಆವೃತವಾಗಿದ್ದು ಸುತ್ತಲೂ ಜಗುಲಿಯ ಮಾದರಿ ಕಟ್ಟಡದಿಂದ ಆವೃತವಾಗಿದೆ. ದೇವಾಲಯದ ಪ್ರಧಾನ ಪ್ರವೇಶದ್ವಾರವೂ ಸೇರಿದಂತೆ ಒಟ್ಟು ೨ ದ್ವಾರಗಳನ್ನು ಒಳಗೊಂಡಿದೆ. ಮತ್ತೆರಡು ದ್ವಾರಗಳು ಪೂರ್ವ ಮತ್ತು ಪಶ್ಚಿಮ ಭಾಗಗಳಲ್ಲಿವೆ.

ದೇವಾಲಯದ ಒಳಗೆ ಪ್ರವೇಶಿಸಿದರೆ ವಿಶಾಲವಾದ ಪ್ರಾಕಾರ ಕಂಡುಬರುತ್ತದೆ. ಇದರ ಮಧ್ಯದಲ್ಲಿ ಅರ್ಕೇಶ್ವರ ಲಿಂಗವನ್ನು ಒಳಗೊಂಡ ಗರ್ಭಗುಡಿ ಇದೆ. ಇದು ಸಹ ವಿಶಾಲವಾಗಿದ್ದು, ಅದರ ಒಳಗೆ ಪ್ರಕಾಶಮಾನವಾದ ಶಿವಲಿಂಗವಿದೆ. ಈ ಶಿವಲಿಂಗವೂ ಸೂರ್ಯನಿಂದ ಪ್ರತಿಷ್ಠಾಪಿಸಲ್ಪಟ್ಟದ್ದು ಎಂದು ನಂಬಲಾಗಿದೆ. ಈ ಪ್ರಧಾನ ಗರ್ಭಗುಡಿಯ ಪಕ್ಕದಲ್ಲಿ ಅಂದರೆ ಬಲಭಾಗಕ್ಕೆ ಗೌರಮ್ಮ ಅಥವಾ ಕಾಮಕ್ಷಮ್ಮನವರ ಸನ್ನಿಧಾನವಿದೆ. ಶಿವನಪತ್ನಿಯಾದ ಗೌರಿಯ ಪೂಜೆಯು ಇಲ್ಲಿ ವಿಶೇಷವಾಗಿ ನಡೆಯುತ್ತದೆ. ಒಳಪ್ರಾಕಾರದಲ್ಲಿ ಸೂರ್ಯ ವಿಗ್ರಹವಿದ್ದು, ೪೦ ಲಿಂಗಗಳಿವೆ. ಅರ್ಕೇಶ್ವರಸ್ವಾಮಿಗೆ ಮಾತ್ರ ಶೈವಾಗಮ ರೀತಿ ಪೂಜೆ ನಡೆಯುತ್ತದೆ. ಉಳಿದ ನಲವತ್ತು ಲಿಂಗಗಳನ್ನು ಒಳಾಂಗಣದ ಸುತ್ತ ಸ್ಥಾಪಿಸಿದ್ದಾರೆ.

ದೇವಾಲಯದ ಪ್ರವೇಶದ್ವಾರದ ಎಡಭಾಗದ ಮೇಲೆ ಸೂರ್ಯದೇವ, ಈಶಾನ್ಯ ಭಾಗದಲ್ಲಿ ಯಾಗಶಾಲೆ, ಅರ್ಕೇಶ್ವರ, ಮೀನಾಕ್ಷಮ್ಮ, ಹಿಂಭಾಗದಲ್ಲಿ ಚಂಡಿಕೇಶ್ವರ, ದಕ್ಷಿಣಮೂರ್ತಿ, ಗಿರಿಜಾಕಲ್ಯಾಣ ಮಂಟಪಗಳನ್ನು ಹೊಂದಿವೆ.

ದೇವಾಲಯದಲ್ಲಿ ನಡೆಯುವ ಆಚರಣೆಗಳು, ಸಂಪ್ರದಾಯಗಳು, ಸಾಮಾನ್ಯ-ವಾಗಿ ಶೈವಾಗಮಗಳ ಪ್ರಕಾರ ನಡೆಯುತ್ತವೆ. ಸೋಮವಾರ ಮತ್ತು ಶುಕ್ರವಾರ ವಿಶೇಷ

ಪೂಜಾದಿನಗಳಾಗಿರುತ್ತವೆ. ಇಲ್ಲಿ ಶೈವಬ್ರಾಹ್ಮಣರು ಮಾತ್ರ ಅರ್ಚಕರಾಗಿರುತ್ತಾರೆ. ಶಿವನು ಅಭಿಷೇಕ ಪ್ರಿಯ ಮತ್ತು ಅಲಂಕಾರಪ್ರಿಯನಾದುದರಿಂದ, ಆ ದಿನಗಳಲ್ಲಿ ಅಭಿಷೇಕ ಮಾಡಿ, ಶಿವಲಿಂಗವನ್ನು ವಿವಿಧ ಪುಷ್ಪಗಳು ಹಾಗೂ ಬಿಲ್ವ ಪತ್ರೆಯಿಂದ ಅಲಂಕರಿಸಿ ಪೂಜಿಸುತ್ತಾರೆ.

ಪ್ರತಿನಿತ್ಯ ಸೂರ್ಯ ಶಿವನ ಪೂಜೆ ಮಾಡುತ್ತಾನೆಂದು ಇಲ್ಲಿಯ ಜನರು ನಂಬಿದ್ದಾರೆ. ಆದ್ದರಿಂದ ಜನರು ಇಲ್ಲಿ ಹಲವು ರೀತಿಯ ಹರಕೆಗಳನ್ನು ಸಲ್ಲಿಸುತ್ತಾರೆ, ಅಲ್ಲದೆ ಶಿವರಾತ್ರಿ ಈ ಭಾಗದ ಎಲ್ಲಾ ವರ್ಗದ ಜನರಿಗೆ ತುಂಬಾ ಸಂಭ್ರಮದ ಭಕ್ತಿಪೂರ್ವಕವಾದ ಹಬ್ಬವಾಗಿದೆ. ಶಿವರಾತ್ರಿ ದಿನ ಉಪವಾಸವಿದ್ದು, ಭಕ್ತಿಯಿಂದ ಶಿವಪೂಜೆಯಲ್ಲಿ ತೊಡಗುತ್ತಾರೆ. ರಾತ್ರಿ ಪೂರ್ತಿ ಜಾಗರಣೆ ಮಾಡುತ್ತಾ ಶಿವಕಥೆ, ಪೂಜೆಯಲ್ಲಿ ತೊಡಗಿ ಅರ್ಕನಾಥ ದೇವಾಲಯದಲ್ಲೇ ಕಾಲ ಕಳೆಯುತ್ತಾರೆ. ಪ್ರತಿ ಶಿವರಾತ್ರಿಯ ಬೆಳಿಗ್ಗೆ ಸೂರ್ಯನ ಕಿರಣವು ಗರ್ಭಗುಡಿಯ ಅರ್ಕೇಶ್ವರ ಲಿಂಗದ ಮೇಲೆ ಬೀಳುವುದನ್ನು ಕಾಣಲು ಭಕ್ತಿಯಿಂದ ಜನ ಕಾದಿರುತ್ತಾರೆ. ಬೆಳಗಿನ ಕಿರಣಗಳು ಲಿಂಗದ ಮೇಲೆ ಬೀಳುವ ಬಗ್ಗೆ ಯಾವುದೇ ರೀತಿಯ ವೈಜ್ಞಾನಿಕ ಕಾರಣಗಳನ್ನು ಕೊಡುವಲ್ಲಿ ವಿಜ್ಞಾನಿಗಳು ವಿಫಲರಾಗಿದ್ದಾರೆ. ಆದರೆ ಧಾರ್ಮಿಕ ವಾಗಿಯೂ ಜನರ ನಂಬಿಕೆಯೇ ಬೇರೆ ತರಹದ್ದಾಗಿದೆ. ಅವರು ಭಾಸ್ಕರರಾಜನು ಶಿವನನ್ನು ಪೂಜಿಸುವ ಸಲುವಾಗಿ ತನ್ನ ಪ್ರಥಮ ಕಿರಣಗಳನ್ನು ಲಿಂಗದ ಮೇಲೆ ಸೂಸುತ್ತಾನೆಂದು ನಂಬಿದ್ದಾರೆ.

ಎಡತೊರೆಯ 'ಶ್ರೀ ಅರ್ಕೇಶ್ವರ ದೇವಾಲಯ'ವು ಐತಿಹಾಸಿಕ ದೃಷ್ಟಿಯಿಂದ ಮತ್ತು ಕ್ಷೇತ್ರದ ಮಹಿಮೆಯಿಂದ ಮೈಸೂರು ಜಿಲ್ಲೆಯ ಪ್ರಮುಖ ದೇವಾಲಯಗಳಲ್ಲಿ ಒಂದಾಗಿದ್ದು ತನ್ನದೇ ಆದ ವಿಶಿಷ್ಟ ಜನಪ್ರಿಯತೆಯನ್ನು ಗಳಿಸಿದೆ.

### ಶ್ರೀ ಅರ್ಕೇಶ್ವರ ಜಾತ್ರಾ ಮಹೋತ್ಸವ

ಜಾತ್ರೆಗಳು ಜಾನಪದ ಜೀವನದ ಅವಿಭಾಜ್ಯ ಅಂಗವಾಗಿರುವಂತೆ ಜಾನಪದ ಸಂಸ್ಕೃತಿಯ ವಿಕಾಸಕ್ಕೆ ಚೈತನ್ಯದಾಯಿಗಳಾಗಿವೆ. ಅವು ಆದಿ ಮಾನವನ ಕಾಲದಿಂದಲೇ ಧಾರ್ಮಿಕ ಆಚರಣೆಗಳ ಒಂದು ಪ್ರಮುಖ ಭಾಗವಾಗಿ ರೂಢಿಯಲ್ಲಿವೆ. ದೇವಾಲಯಗಳ ಇತಿಹಾಸದೊಡನೆ ಜಾತ್ರೆಗಳ ಇತಿಹಾಸವನ್ನು ಗಂಟು ಹಾಕುವುದುಂಟು. ಆದರೆ ಇದು ಪೂರ್ಣ ಸತ್ಯವಾದುದಲ್ಲ. ಏಕೆಂದರೆ ಕೆಲವು ಕಡೆ ದೇವಾಲಯಗಳಿದ್ದು, ಜಾತ್ರೆಗಳೂ ನಡೆಯದೇ ಇರುವುದನ್ನು ನಾವು ಇಂದಿಗೂ ಕಾಣಬಹುದು. ಸಾಮಾನ್ಯವಾಗಿ ಎಲ್ಲಾ ಜಾತ್ರೆಗಳೂ ಯಾವುದಾದರೊಂದು ದೇವರ ಹೆಸರಿನಲ್ಲಿ ಅಥವಾ ಊರಿನ ಆಶ್ರಯದಲ್ಲಿ ನಡೆಯುತ್ತದೆ.

ಕೃಷ್ಣರಾಜನಗರದ ಅಥವಾ ಎಡತೊರೆಯ ಅರ್ಕೇಶ್ವರ ಜಾತ್ರೆಯೂ ಹಿಂದಿನಿಂದಲೂ ನಡೆಯುತ್ತಿತ್ತು ಎಂದು ಹೇಳುವಂತಿಲ್ಲ. ಪ್ರತಿವರ್ಷ ನಡೆಯುತ್ತಾ ಬಂದಿದೆಯಾದರೂ, ಅಂತಹ ದೊಡ್ಡ ಜಾತ್ರೆಯೇನಲ್ಲ, ದೇವಾಲಯದ ಅಕ್ಕ-ಪಕ್ಕದ ಗ್ರಾಮಸ್ಥರು ಸೇರಿ ನಡೆಸುವ ಈ ಜಾತ್ರೆ ಸ್ಥಳೀಯವಾಗಿ ಮಾತ್ರ ಪ್ರಚಾರದಲ್ಲಿದೆ.

ಪ್ರತಿವರ್ಷ ಮಾಘ ಶುದ್ಧ ರಥಸಪ್ತಮಿಯಂದು ರಥೋತ್ಸವ ನಡೆಯುವ ಈ ಜಾತ್ರೆಯಲ್ಲಿ ಇತ್ತೀನ ವರ್ಷಗಳಲ್ಲಿ ಸ್ಥಳೀಯ ಪುರಸಭೆ ದಿನಗಳ ಜಾತ್ರೆಯನ್ನು ನಡೆಸಲು ಪ್ರಯತ್ನಿಸಿ ಯಶಸ್ವಿಯಾಗಿದೆ. ಸಾಮಾನ್ಯವಾಗಿ ಫೆಬ್ರವರಿ ತಿಂಗಳಲ್ಲಿ ೨ ದಿನಗಳ ಕಾಲ ಈ ಜಾತ್ರೆ ನಡೆಯುತ್ತದೆ. ಮೊದಲದಿನ ಹೋಮ - ಹವನಾದಿಗಳನ್ನು ಮಾಡಿ, ಶಿವಲಿಂಗವನ್ನು ಪೂಜಿಸಿ ಉತ್ಸವಗೈದು, ಜಾತ್ರೆಗೆ ಹಸಿರು ನಿಶಾನೆ ತೋರಿಸುತ್ತಾರೆ. ಅಂದು ರಾತ್ರಿಯ ವೇಳೆಯಲ್ಲಿ ಸ್ಥಳೀಯ ಗ್ರಾಮಸ್ಥರಿಂದ ವಿವಿಧ ರೀತಿಯ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುತ್ತವೆ. ಎರಡನೇ ದಿನದ ರಥೋತ್ಸವದಂದು ಅರ್ಕೇಶ್ವರನನ್ನು ರಥದಲ್ಲಿಟ್ಟು ದೇವಾಲಯದ ಸುತ್ತ ಎಳೆಯಲಾಗುತ್ತದೆ. ಮಾರನೆಯ ದಿವಸರಾತ್ರಿ ಕಾವೇರಿ ನದಿಯಲ್ಲಿ ತೆಪ್ಪೋತ್ಸವ ನೆರವೇರುತ್ತದೆ. ಅಂದು ಗ್ರಾಮಸ್ಥರಿಂದ ಯಾವುದಾದರೊಂದು ಪೌರಾಣಿಕ ನಾಟಕ ಆಡುವ ಹವ್ಯಾಸ ರೂಢಿಯಲ್ಲಿದೆ.

ಈ ಜಾತ್ರೆ ಇತ್ತೀಚಿನ ದಿನಗಳಲ್ಲಿ ದನಗಳ ಜಾತ್ರೆಯಾಗಿಯೂ ಮಾರ್ಪಡುತ್ತಿದ್ದು, ಸದ್ಯದ ಪರಿಸ್ಥಿತಿಯಲ್ಲಿ ಇದು ಸಣ್ಣಪ್ರಮಾಣದ ದನಗಳ ಜಾತ್ರೆಯಾಗಿದೆ. ಜಾತ್ರೆಯಲ್ಲಿ ಭಾಗವಹಿಸಿದ ಉತ್ತಮರಾಸುಗಳಿಗೆ ಪುರಸಭೆ ವತಿಯಿಂದ ಬಹುಮಾನಗಳನ್ನು ನೀಡಲಾಗುತ್ತದೆ.



ಅರ್ಕೇಶ್ವರ ದೇವಾಲಯದ ಹೊರಾಂಗಣದ ಸುಂದರ ದೃಶ್ಯ



ಎಡತೊರೆ ಶ್ರೀ ಅರ್ಕೇಶ್ವರ ಸ್ವಾಮಿ



ಜಾತ್ರೆಯಲ್ಲಿ ಭಾಗವಹಿಸಿರುವ ದನಗಳ ರಾಸು



ಎಡತೊರೆ ಶ್ರೀ ಅರ್ಕೇಶ್ವರ ಸ್ವಾಮಿ ರಥೋತ್ಸವದ ದೃಶ್ಯ

# ಅಧ್ಯಾಯ – ೫

# ಕಪ್ಪಡಿ ಜಾತ್ರಾಮಹೋತ್ಸವ

**ಭೌಗೋಳಿಕ ಹಿನ್ನೆಲೆ:** 'ಕಪ್ಪಡಿ' ಎಂದಾಕ್ಷಣ ನೆನಪಿಗೆ ಬರುವುದು ಹನ್ನೆರಡನೆಯ ಶತಮಾನದ ಶಿವಶರಣ ನೇತಾರ ಮಹಾಮಾನವತಾವಾದಿ ಬಸವಣ್ಣನವರ ಕಪ್ಪಡಿ ಸಂಗಮ. ಆದರೆ ಇದು ಬಸವಾದಿ ಶರಣರಿಂದಲೇ ಪ್ರೇರಣೆ ಪಡೆದು ಬಸವತತ್ವ ಪ್ರಚಾರ ಮಾಡಿಕೊಂಡು ಬಂದ ಶರಣಪರಂಪರೆಯ ರಾಚಪ್ಪಾಜಿ ಚೆನ್ನಮ್ಮಾಜಿಯವರು ನೆಲೆನಿಂತ ಕಪ್ಪಡಿ ಕ್ಷೇತ್ರ.

ಮೈಸೂರು ಜಿಲ್ಲೆಗೆ ಏಳು ತಾಲ್ಲೂಕುಗಳು ಸೇರಿವೆ. ಅವುಗಳಲ್ಲಿ ಬಂದಾದ ಕೃಷ್ಣರಾಜನಗರ ತಾಲ್ಲೂಕು ಜಿಲ್ಲೆಯ ವಾಯವ್ಯ ಭಾಗದಲ್ಲಿದೆ. ಭೌಗೋಳಿಕವಾಗಿ ಸುಮಾರು ೧೨°, ೧೦°, ಉ ೧೨°, ೧೫° ಉತ್ತರ ಅಕ್ಷಾಂಶ ಹಾಗೂ ೧೫° ಉತ್ತರ ಅಕ್ಷಾಂಶ ಹಾಗೂ ೭೫°, ೫೦°, ಪೂರ್ವದಿಂದ ೭೦°, ೭೫° ಪೂರ್ವರೇಖಾಂಶಗಳ ನಡುವೆ ವಿಸ್ತರಿಸಿದೆ. ಉತ್ತರ ದಕ್ಷಿಣವಾಗಿ ಸುಮಾರು ೨೭ ಕಿ.ಮೀ ಅಗಲವಾಗಿಯೂ ಮತ್ತು ಪಶ್ಚಿಮ ಪೂರ್ವವಾಗಿ ಸುಮಾರು ೩೯ ಕಿ.ಮೀ.ಗಳಷ್ಟು ಉದ್ದವಾಗಿ ವ್ಯಾಪಿಸಿದೆ.

ಕಪ್ಪಡಿ ಕೃಷ್ಣರಾಜನಗರ ತಾಲ್ಲೂಕಿನ ಪ್ರಮುಖ ಸ್ಥಳ. ಜನಪದ ನಂಬಿಕೆ, ಜನಪದ ಕಾವ್ಯ ಹಾಗೂ ಧಾರ್ಮಿಕ ನಂಬಿಕೆ ಆಚರಣೆಗಳಲ್ಲಿ ಇಡೀ ಮೈಸೂರು ಜಿಲ್ಲೆಯಲ್ಲಿ ಪ್ರಭಾವೀ ಕೇಂದ್ರವಾಗಿ ಪ್ರಸಿದ್ಧವಾಗಿದೆ. ಕೃಷ್ಣರಾಜನಗರದಿಂದ ಚುಂಚನಕಟ್ಟೆಗೆ ಹೋಗುವ ರಸ್ತೆಯಲ್ಲಿ ಸುಮಾರು ೮ ಕಿ.ಮೀ. ದೂರ ಕ್ರಮಿಸಿದರೆ ಹೆಬ್ಬಾಳು ಎಂಬ ಊರು ಸಿಗುತ್ತದೆ. ಈ ಊರಿನ ರಸ್ತೆ ಬದಿಯಲ್ಲಿರುವ ಬಸವೇಶ್ವರ ರೈಸ್‌ಮಿಲ್‌ಗೆ ಎದುರಾಗಿ ಒಂದು ದಾರಿ ಹೋಗುತ್ತದೆ. ಈ ದಾರಿಯಲ್ಲಿ ಸುಮಾರು ೪.೦೬ ಕಿ.ಮೀ. ದೂರ ಕ್ರಮಿಸಿದರೆ ಧರೆಗೆ ದೊಡ್ಡವರೆಂದೇ ಖ್ಯಾತರಾದ ಮಂಟೇಸ್ವಾಮಿಯವರ ಅಗ್ರಮಾನ್ಯ ಶಿಷ್ಯರಾದ ರಾಚಪ್ಪಾಜಿ ಮತ್ತು ಚೆನ್ನಾಜಮ್ಮನವರು ಪವಡಿಸಿರುವ ಗದ್ದುಗೆಯಿದೆ.

ಕೊಡಗು ಭಾಗಮಂಡಲದ ಬ್ರಹ್ಮ-ಗಿರಿ ಪರ್ವತದಲ್ಲಿ ಜನಿಸಿ ಬರುವ ದಕ್ಷಿಣ ಗಂಗೆ ಎನಿಸಿರುವ ದಾರಿಯುದ್ದಕ್ಕೂ ಜೀವನದಿಯಾಗಿ ನೆಲವನ್ನು ತಣಿಸುತ್ತಾ ನಲಿನಲಿಯುತ್ತಾ ಬಂದು ಎಲ್ಲೆಲ್ಲೂ ಸಂಮೃದ್ಧಿಯನ್ನು ಸುರಿಸುತ್ತಾ ಬಂದಿರುವ ಕಾವೇರಿ ನದಿ ದಂಡೆಯ ಮೇಲಿದೆ. ಈ ಕ್ಷೇತ್ರದ ಸುತ್ತಲೂ ಗದ್ದೆ ಬಯಲು ಹೊಂದಿಕೊಂಡಂತೆ ಹಚ್ಚ ಹಸಿರಿನ ಮರದ ತೋಪುಗಳಿಂದ ಆವರಿಸಿ ಸ್ವಾಭಾವಿಕವಾಗಿಯೇ ಬಲು

ಸುಂದರವಾಗಿದೆ. ನಿತ್ಯ ನಿರ್ಮಲ ಸೊಬಗಿನ ಆಗರವೆನಿಸಿ ಪ್ರಶಾಂತ ವಾತಾವರಣದ ಪರಮ ಪವಿತ್ರ ತಪೋ ಭೂಮಿಯಾಗಿದೆ. ಈ ದಿವ್ಯ ನೆಲೆಯೇ ಧರ್ಮಕರ್ತೃ ರಾಚಪ್ಪಾಜಿ ಹಾಗೂ ಅವರ ತಂಗಿ ಚೆನ್ನಾಜಮ್ಮನವರು ತಮ್ಮ ಕೊನೆಯ ದಿನಗಳನ್ನು ಕಳೆದ ಕ್ಷೇತ್ರ.

ರಾಚಪ್ಪಾಜಿ ಮತ್ತು ಚೆನ್ನಾಜಮ್ಮನವರು ಇಲ್ಲಿ ನೆಲೆಸಲು ಈ ಪ್ರದೇಶದ ಭೌಗೋಳಿಕ ಹಿನ್ನೆಲೆಯೇ ಮುಖ್ಯ ಕಾರಣವಾಗಿದೆ. ಇವರು ಇಲ್ಲಿ ಬಂದು ನೆಲೆಸುವುದಕ್ಕಿಂತ ಮುಂಚೆ ಬರುವಾಗ ಚಂದಗಾಲಿನಿಂದ ಮುಂದೆ ರಾಮಸಮುದ್ರ ತಿಪ್ಪೂರುಗಳ ಹತ್ತಿರ ಒಂದುವಾರ ನೆಲೆಸಿದ್ದರು. ಆಗ ರಾಮಸಮುದ್ರ ಮತ್ತು ತಿಪ್ಪೂರಿನ ಕೋಳಿಕೂಗುವ ಸದ್ದು, ನಾಯಿ ಬೊಗಳುವ ಸದ್ದು, ಗಲಗಲ ಭತ್ತಕುಟ್ಟುವ ಸದ್ದು, ರಾಗಿ ಬೀಸುವ ಸದ್ದು ಕೇಳಿ ಪ್ರಶಾಂತ ವಾತಾವರಣದಲ್ಲಿ ನೆಲೆಸಬೇಕು ಅಂತ ನಾನು ಇಲ್ಲಿಗೆ ಬಂದರೆ ಹೀಗಾಯಿತಲ್ಲ ಎಂದು ಅವರ ಮನಸು ಕಲಕಿ ಕೂಡಲೇ ಏಳು ನೂರು ಮಾರಿಯರನ್ನು ಕರೆದು 'ತಿಪ್ಪೂರು ರಾಮಸಮುದ್ರಗಳನ್ನು ಹಾಳುಮಾಡಿಬಿಡಿ' ಎಂದು ಆಜ್ಞಾಪಿಸಿದರು. ಅಲ್ಲಿಂದ ಮುಂದೆ ಕಾವೇರಿ ತೀರಕ್ಕೆ ಬಂದು ಆ ಪ್ರಶಾಂತ ಸ್ಥಳವನ್ನು 'ಹೊಸ ಕಪ್ಪಡಿ' ಎಂದು ಕರೆದು ನೆಲೆಗೊಂಡರು ಮೊದಲು ನೆಲೆಸಿದ್ದನ್ನು 'ಹಳೆಕಪ್ಪಡಿ' ಎಂದು ಕರೆಯುತ್ತಾರೆ.

ಕಪ್ಪಡಿ ಕ್ಷೇತ್ರವೂ ಮೊದಮೊದಲು ಅಷ್ಟು ಪ್ರಸಿದ್ಧಿಯಾಗಿದೆ. ಕಾಲಾನಂತರ ಈ ಕ್ಷೇತ್ರವು ಭಕ್ತರ ಪ್ರಸಿದ್ಧಿಯಾಗಿದೆ. ಕಾಲಾನಂತರ ಈ ಕ್ಷೇತ್ರವು ಭಕ್ತರ ಪ್ರೇಕ್ಷಣೀಯ ಸ್ಥಳವಾಗಿ ಬೆಳೆದಿದೆ. ಈ ಕ್ಷೇತ್ರ ಇಷ್ಟೊಂದು ಖ್ಯಾತಿಗೆ ಬರಲು ಕಾರಣದೇವರ ಮಹಿಮೆ ಮತ್ತು ನಂಬಿಕೆ ಕಾರಣವಾಗಿದೆ. ಜನರಿಗೆ ಎಂತಹ ತೊಂದರೆಯಾದರೂ ಈ ಕ್ಷೇತ್ರಕ್ಕೆ ಬಂದು ಪೂಜೆ ಮಾಡಿದರೆ ಕಷ್ಟಗಳೆಲ್ಲ ಪರಿಹಾರವಾಗುತ್ತದೆ ಎಂಬ ಮಾತನ್ನು ಇಲ್ಲಿಗೆ ಬರುವ ಯಾತ್ರಿಕರೇ ಹೇಳುತ್ತಾರೆ.

ಒಟ್ಟಾರೆ ನಮ್ಮ ಪುಣ್ಯಕ್ಷೇತ್ರ ಕಪ್ಪಡಿಯಲ್ಲಿನ ಭೌಗೋಳಿಕ ಹಿನ್ನೆಲೆ ಇತಿಹಾಸದ ಪುಟಗಳಲ್ಲಿ ಬರೆದಿಡುವಂತಹದ್ದು ಕಾವೇರಿ ನದಿ ದಂಡೆಯ ಪ್ರಕೃತಿಸಿರಿಯ ಕಪ್ಪಡಿ ಅತ್ಯುತ್ತಮ ಶಾಂತಿಧಾಮವಾಗಿದೆ, ಭಕ್ತರ ತಪೋನಿಧಿಯಾಗಿದೆ.

**ಕಪ್ಪಡಿ ರಾಚಪ್ಪಾಜಿ ದೇವಾಲಯದ ಪಕ್ಷಿನೋಟ**

ಕಾವೇರಿ ಮಡಿಲಲ್ಲಿರುವ ಕಪ್ಪಡಿ ದೇವಾಲಯಕ್ಕೆ ಯಾವುದೇ ರೀತಿಯ ಐತಿಹಾಸಿಕ ಹಿನ್ನೆಲೆ ಇಲ್ಲ. ಯಾವುದೇ ರಾಜರ ಕಾಲದಲ್ಲಿ ಈ ದೇವಾಲಯ

ನಿರ್ಮಾಣಗೊಂಡಿಲ್ಲ. ಹಾಗೂ ಯಾವುದೇ ರೀತಿಯ ವಿಶಿಷ್ಟ ಶೈಲಿಯನ್ನು ಒಳಗೊಂಡಿಲ್ಲ.

ಪ್ರಾರಂಭದಲ್ಲಿ ನಮ್ಮ ಶಿವಶರಣರ ಗದ್ದುಗೆಗಳು ತೆಂಗಿನ ಗರಿಗಳ ಗುಡಿಸಲಿನಿಂದ ನಿರ್ಮಿತವಾಗಿದ್ದು ಕಾಲಕ್ರಮೇಣ ಗಾರೆಯಿಂದ ನಿರ್ಮಿತವಾಯಿತು. ಮುಂದೆ ೩೦ ವರ್ಷಗಳಿಂದೀಚೆಗೆ ಗದ್ದುಗೆಯನ್ನು ಅಮೃತಶಿಲೆಯಿಂದ ನಿರ್ಮಿಸಲಾಗಿದೆ.

ರಾಚಪ್ಪಾಜಿ ಗದ್ದುಗೆಯ ನಾಲ್ಕು ಗೋಡೆಗಳ ಮಧ್ಯೆ ವಿಶಾಲವಾದ ಪ್ರಾಂಗಣದೊಳಗೆ ನಿರ್ಮಿತವಾಗಿದೆ. ಗದ್ದುಗೆಯ ನೆಲದಿಂದ ಮೂರು ಅಡಿ ಎತ್ತರವಿದ್ದು ಮೂರು ಹಂತಗಳನ್ನು ಒಳಗೊಂಡಿದ್ದು ಇವುಗಳ ಮಧ್ಯೆ ರಾಚಪ್ಪಾಜಿಯ ಗದ್ದುಗೆ ಇದೆ. ನಾಲ್ಕು ಗೋಡೆಯ ಸುತ್ತಲೂ ಕಿಟಕಿ ಇದ್ದು ಅದನ್ನು ಗಾಜಿನ ಬಾಗಿಲಿನಿಂದ ಮುಚ್ಚಲಾಗಿದ್ದು ಅದರ ಮೇಲ್ಭಾಗದಲ್ಲಿ ಕಬ್ಬಿಣದ ಸರಳುಗಳನ್ನು ಹಾಕಲಾಗಿದೆ. ಈ ದೇವಾಲಯದ ಮೇಲ್ಭಾಗದಲ್ಲಿ ಕಬ್ಬಿಣದ ಸರಳುಗಳನ್ನು ಹಾಕಲಾಗಿದೆ. ಈ ದೇವಾಲಯದ ಮೇಲ್ಭಾಗದಲ್ಲಿ ಮುಂದೆ ಮಧ್ಯದಲ್ಲಿ ಶಿವನ ಲಿಂಗವಿದ್ದು ನಾಲ್ಕು ದಿಕ್ಕುಗಳಲ್ಲಿ ಬಸವನ ವಿಗ್ರಹವಿದೆ.

ಚೆನ್ನಾಜಮ್ಮನವರ ಗದ್ದುಗೆಯು ಇದೇ ರೀತಿ ಮೂರು ಮೆಟ್ಟಿಲುಗಳಿಂದ ಗದ್ದುಗೆ ನಿರ್ಮಿತವಾಗಿದ್ದು ಸುತ್ತಲೂ ಗಾಜಿನ ಕಿಟಕಿಗಳಿಂದ ಮುಚ್ಚಲ್ಪಟ್ಟಿದೆ. ದೇವಾಲಯದ ಬಾಗಿಲ ಮೇಲ್ಭಾಗದಲ್ಲಿ ಚೆನ್ನಾಜಮ್ಮನವರ ಚಿಕ್ಕ ವಿಗ್ರಹವಿದೆ.

ಇವೆರಡು ಗದ್ದುಗೆಯ ಹಿಂಬಾಗದಲ್ಲಿ ಉರಿಗದ್ದುಗೆಯಿದ್ದು ಇದಕ್ಕೆ ಮೆಟ್ಟಿಲುಗಳಿದ್ದು ಎತ್ತರವಾದ ಪೀಠವಿದೆ. ಇತ್ತೀಚೆಗೆ ಇದಕ್ಕೆ ಹಾಕಿಸಲಾಗಿದೆ. ಈ ಉರಿಗದ್ದುಗೆಯ ಸುತ್ತಲೂ ಕಬ್ಬಿಣ ಸರಳುಗಳಿಂದ ಇದು ಸುತ್ತಲೂ ರಕ್ಷಾಕವಚದಂತಿದೆ. ಹಾಗೆಯೇ ಇದರ ಸುತ್ತಾಮುತ್ತಾ ಚಿಕ್ಕಪುಟ್ಟಗುಡಿಗಳಿವೆ.

ಈ ದೇವಾಲಯದ ಹೊರಾಂಗಣವನ್ನು ಗಮನಿಸಿದರೆ ಕಾವೇರಿ ನದಿಯ ಪಕ್ಕದಲ್ಲಿಯೇ ಹರಿಯುತ್ತಿರುವ ಜುಳು ಜುಳು ಶಬ್ದ ಗದ್ದೆ ಬಯಲಿನ ಹಚ್ಚ ಹಸಿರಿನ ತೋಪುಗಳಿಂದ ಆವರಿಸಿರುವ ನಿತ್ಯ ನಿರ್ಮಲ ಸೊಬಗಿನ ಆಗರವಾದ ಪ್ರಶಾಂತ ವಾತಾವರಣದಲ್ಲಿ ಪರಮ ಪವಿತ್ರ ತಪೋಭೂಮಿಯಾಗಿರುವ ಈ ದೇವಾಲಯ ಪ್ರವಾಸಿಗರನ್ನು ಹಾಗೂ ಭಕ್ತಾದಿಗಳನ್ನು ಕೈಬೀಸಿ ಕರೆಯದಿರದು.

ಈ ದೇವಾಲಯದ ಪ್ರಮುಖ ಆಕರ್ಷಣೆ ಎಂದರೆ ಯಾವುದೇ ನಿರ್ದಿಷ್ಟ ಜಾತಿ ಧರ್ಮಪಂಗಡದವರು ಮಾತ್ರ ಇದರ ಭಕ್ತರಾಗಿಲ್ಲ. ಹಲವು ಜಾತಿಯ ಪಂಗಡಗಳ ಜನರು ಈ ಕ್ಷೇತ್ರಕ್ಕೆ ಭಕ್ತರಾಗಿದ್ದಾರೆ. ಮುಸ್ಲಿಮರು, ಕ್ರೈಸ್ತರು ಬಂದು ಪೂಜೆ

ಸಲ್ಲಿಸುವುದನ್ನು ಕಣ್ಣಾರೆ ಕಾಣಬಹುದಾಗಿದೆ. ಆದ್ದರಿಂದ ಈ ದೇವಾಲಯ ಸರ್ವಧರ್ಮ ಸಮನ್ವಯದ ಕೇಂದ್ರವಾಗಿದೆ.

**ಮಂಟೇಸ್ವಾಮಿ ಪರಂಪರೆಯಲ್ಲಿ ರಾಚಪ್ಪಾಜಿ ಜೀವನ ಕಥೆ**

ಭರತ ಭೂಮಿಯಲ್ಲಿ ಕಾಲಕಾಲಕ್ಕೆ ಮನುಕುಲೋದ್ಧಾರಕ್ಕಾಗಿ ಪರಮಾತ್ಮ ಬೇರೆ ಬೇರೆ ರೂಪದಲ್ಲಿ, ಹೆಸರಿನಲ್ಲಿ ಅವತರಿಸಿ ಬರುತ್ತಾನೆಂಬ ಪೌರಾಣಿಕ ನಂಬಿಕೆ ಇದೆ. ಭಗವಂತ ಅವತಾರ ಧರಿಸಿದ ವಿಭೂತಿ ಪುರುಷರಿಗೆ ಸತ್ಪುರುಷರು, ಸಂತರು, ಶ್ರೀಗಳು ಎಂದು ಹಲವು ವಿಧವಾಗಿ ಕರೆಯಲಾಗಿದೆ. ಪುಣ್ಯಭೂಮಿ ಕರ್ನಾಟಕದಲ್ಲಿಯೂ ಇಂತಹ ಹಲವು ವಿಭೂತಿ ಪುರುಷರು ಅವತರಿಸಿ ಸರ್ವವಿಧದಿಂದ ಜನರುದ್ಧಾರ ಮಾಡಿದ ಸಂಗತಿಗಳು ಜನಜನಿತವಾಗಿದೆ. ಶ್ರೀ ರೇವಣ್ಣಸಿದ್ಧರು, ಶ್ರೀಸಿದ್ಧರಾಮೇಶ್ವರರು, ಶ್ರೀನಿಜಗುಣರು, ಶ್ರೀ ಷರೀಫರು, ಶ್ರೀ ಗುರುಲಿಂಗಸ್ವಾಮಿಗಳು, ಮಡಿವಾಳೇಶ್ವರರು, ಗುರುಸಿದ್ಧೇಶ್ವರರು, ಅಲ್ಲಮ ಪ್ರಭುಗಳು, ಶ್ರೀ ಫಲಹಾರೇಶ್ವರರು ಮುಂತಾದವರು ಈ ಮಾಲಿಕೆಯಲ್ಲಿ ಪ್ರಮುಖರು ಅವರ ಅಭಿಲಾಷೆ ಸರ್ವರೂ ಸುಖಿಗಳಾಗಬೇಕು ಎಂಬುದಾಗಿರುತ್ತದೆ.

ಇಂತಹ ಮಹಾನುಭಾವರಲ್ಲಿ ವಿಭೂತಿ ಪುರುಷರಾದ ಮಂಟೇಸ್ವಾಮಿಯವರು ಹಾಗೂ ಅವರ ಶಿಷ್ಯರಾದ ರಾಚಪ್ಪಾಜಿ, ಫಲಾರದಯ್ಯ ಮುಖ್ಯರು. ಇವರ ಕಥೆಗಳನ್ನು ಹಾಡುವ ನೀಲಗಾರರು ಎಂಬ ಜನಪದ ಧಾರ್ಮಿಕ ವೃತ್ತಿಗಾಯಕರಿದ್ದಾರೆ. ಈ ಗಾಯಕರ ಮಂಟೇಸ್ವಾಮಿ ಮಹಾಕಾವ್ಯ ಅತ್ಯಂತ ದೀರ್ಘವೂ ಅಪೂರ್ವವೂ ಆದ ಮಹಾಕಾವ್ಯವಾಗಿದೆ. ಇದರಲ್ಲಿ ರಾಚಪ್ಪಾಜಿಯವರ ಕಥಾಭಾಗವೂ ಸಾಕಷ್ಟು ದೀರ್ಘ-ವಾಗಿ ಮೂಡಿಬಂದಿದ್ದು ರಾಚಪ್ಪಾಜಿಯವರ ಘನ ವ್ಯಕ್ತಿತ್ವವನ್ನು ಅತಿಶಯವಾದ ರೀತಿಯಲ್ಲಿ ರೂಪಿಸಿದೆ.

ಕಲ್ಯಾಣದಲ್ಲಿ ಬಸವಣ್ಣನವರು ಮತ್ತು ನೀಲಮ್ಮನವರು ಇರುವಾಗ ಒಂದು ದಿನ ಅಣ್ಣ ಬಸವ ಒಂದು ಬದನೇಕಾಯಿ ಹಾಕಿ, ಒಕ್ಕಳ ಅಕ್ಕಿ ಹಾಕಿ ಆರಾಧನೆ ಮಾಡಿದ ಲಕ್ಷದ ಮೇಲಣ ತೊಂಬತ್ತಾರು ಸಾವಿರ ಗಣಂಗಳಿಗೆಲ್ಲ ನಿತ್ಯ ಭೋಜನ ಮಾಡಿಸುತ್ತಾ ಇರುತ್ತಿರುವಾಗ ಅಹಂಕಾರ ಪ್ರಾಪ್ತವಾಗಿ ಹೆಂಡತಿ ನೀಲಮ್ಮನಿಗೆ 'ಈ ಲೋಕದಲ್ಲಿ ನನಗಿಂತಲೂ ಹೆಚ್ಚಿನ ಧರ್ಮಗುರುವೇ ಇಲ್ಲ' ಎಂದು ಬಿಡುತ್ತಾರೆ. ಹೀಗೇಕೆ ಬಸವ ಅಹಂಕಾರಿಯಾದನೆಂದು ಪರಿತಪಿಸುವ ನೀಲಮ್ಮನವರಿಗೆ ಕನಸಿನಲ್ಲಿ ಕಾಣಿಸಿಕೊಂಡ ಪರಂಜ್ಯೋತಿಯವರು ಕಲ್ಯಾಣಕ್ಕೆ ನಾವು ಸದ್ಯದಲ್ಲಿಯೇ ಬಂದು ನಮ್ಮ ಭಕ್ತರ

ನಿಜವನ್ನು ಪರೀಕ್ಷಿಸುತ್ತೇವೆ ಎಂದು ಹೇಳುತ್ತಾರೆ. ಆಗ ಘನ ನೀಲಮ್ಮನವರು ಬಸವಣ್ಣನವರಿಗೆ ನಮಗಿಂತ ಹೆಚ್ಚಿನ ಗುರುಗಳು ಇದ್ದಾರೆ. ನಾವೇ ಹೆಚ್ಚು ಎಂದು ತಿಳಿಯಬಾರದು ಎಂದು ಕಲ್ಯಾಣದ ಕಡೆಯ ಬಾಗಿಲಲ್ಲಿ ನಾಲಗೆಯೇ ಇಲ್ಲದ ಚಕ್ಕಳದ ಗಂಟೆಯೊಂದನ್ನು ಕಟ್ಟಿಬಿಡಿ. ಕಲ್ಲುಬಸವನನ್ನು ಪ್ರತಿಷ್ಠಾಪಿಸಿ ಆಗ ನಿಮಗಿಂತಲೂ ಹೆಚ್ಚಿನ ನಿಜಗುರುಗಳು ಧರೆಗೆ ದೊಡ್ಡವರು ಕಲ್ಯಾಣಕ್ಕೆ ಬರುವಾಗ ನಾಲಿಗೆ ಇಲ್ಲದ ಗಂಟೆ ಬಾರಿಸುತ್ತದೆ. ಕಲ್ಲು ಬಸವ ಅಂಬಾ ಎಂದು ಕೂಗುತ್ತದೆ ಎಂದು ಹೇಳುತ್ತಾರೆ. ಅದಕ್ಕೆ ಬಸವಣ್ಣನವರಿಗೆ ಪೂರ್ವಸ್ಮರಣೆ ಉಂಟಾಗಿ ಹೆಚ್ಚಿನ ಗುರುಗಳು ಕಲ್ಯಾಣಕ್ಕೆ ಇನ್ನೇನು ಬರುತ್ತಾರೆ ಎನ್ನುವ ಕಾಲ ಪ್ರಾಪ್ತಿಯಲ್ಲಿ ಮಹಾಮಹಂತ ಹರಳಯ್ಯನವರು ಚೆಮ್ಮಾವುಗೆ ಒಂದು ಜೊತೆಯನ್ನು ಮಾಡಿಕೊಂಡು ಬರುತ್ತಾರೆ. ಆ ಮುಯತ್ತಿನ ಆವುಗೆಯೇ ಆ ಮಹಾಗುರುವು ಬರುವ ಮುನ್ಸೂಚನೆ ಎಂದರು.

ಇದ್ದಕ್ಕಿದ್ದಂತೆಯೇ ಒಂದು ದಿನ ಅಣ್ಣ ಬಸವಣ್ಣನವರು ತಮಗೆ ಸಲ್ಲುವುದಕ್ಕಿಂತಲೂ ಹೆಚ್ಚಿನ ಗೌರವ ತೋರಿದರೆಂದು ಅದರಿಂದ ತಮಗೆ ಪಾಪದ ಹೊರೆ ಏರಿ ಬಂತೆಂದು, ಅದರ ಪರಿಹಾರಾರ್ಥವಾಗಿ ತಮ್ಮ ಬಲತೊಡೆಯ ಚರ್ಮ ಹಾಗೂ ಮಡದಿಯ ಎಡತೊಡೆಯ ಚರ್ಮಸುಲಿದು ಮುತ್ತಿನ ಪವಿತ್ರ ಆವುಗೆಯನ್ನು ಮಾಡಿ ಅಣ್ಣನವರ ಪಾದಗಳಿಗೆ ತೊಡಿಸುವ ಆಸೆ ಹಚಿತ್ತು ಬಂದರು ಮಹಾಶರಣ ಹರಳಯ್ಯನವರು.

ಆಗ ಬೆಚ್ಚಿ ಬಿದ್ದ ಬಸವಣ್ಣ ಮಹಾಶರಣ ಹರಳಯ್ಯನವರೇ ನೀವು ಮಾಡಿರುವ ಈ ಆವುಗೆ ಮುಂದೆ ಬರುವ ಮಹಾಂತ ಮಹದೇಶ್ವರರು ಧರಿಸುವ ಆವುಗೆ ಆದ್ದರಿಂದ ತಾವು ಅವುಗಳನ್ನು ಜೋಪಾನವಾಗಿಡಿ ಎಂದು ಹೇಳಿ ತಮಗೆ ಬರಬೇಕಾದ ಮುನ್ಸೂಚನೆ ಬಂತೆಂದು ಇನ್ನೇನು ತಮ್ಮ ಧರ್ಮಗುರುವಾದ ಅಲ್ಲಮ್ಮ ಪ್ರಭುಗಳು ಎಂದು ಕರೆಸಿಕೊಳ್ಳುವ ಆದಿ ಪರಂಜ್ಯೋತಿಯವರು ಬಂದೇ ಬರುವರೆಂದು ಅವರಿಗಾಗಿ ಮೈಮನವೆಲ್ಲ ಕಣ್ಣಾಗಿ ಕಾಯುತ್ತಿರಲಾಗಿ ಒಂದು ಶುಭದಿನ ನಾಲಿಗೆ ಇಲ್ಲದ ಗಂಟೆ ಮಂಗಳ ವಾದ್ಯಮಾಡಿ, ಕಲ್ಲಿನ ಬಸವ ಕೂಗಿತು. ಕಲ್ಯಾಣದ ಕಡೆಯ ಬಾಗಿಲ ಬಳಿಯ ಪಹರೆಯವರ ಮುಂದಿ ವಿಕಾರ ರೂಪು, ಚಿತ್ರವಿಚಿತ್ರವಾದ ಕೊಳಕಾದ ಬಟ್ಟೆ ಬರೆತೊಟ್ಟು ಎಡಗೈಯಲ್ಲಿ ಹೆಂಡದ ಗಡಿಗೆ ಹಿಡಿದು ಹೆಗಲ ಮೇಲೆ ಸತ್ತ ಎಮ್ಮೆ, ಕರುವಿನ ಚಕ್ಕಳ ಹೊತ್ತು ಮೈಯಲ್ಲಿ ಕೀವು, ರಕ್ತ ನೊಣ ಮುತ್ತಿದ್ದು, ಸೊತ್ತು ಕಾಲು ಕೈಯವರಂತೆ ಹಿಂದಿಂದಕ್ಕೆ ಓಡೋಡುತ್ತಾ ಮುಂದೆ ಮುಂದಕ್ಕೆ ನಡೆದಾಡುತ್ತಾ ಬಂದು ನಿಂತು ಹೇಳುತ್ತಾರೆ.

'ಅಪ್ಪಾ ನಾವು ಏಳೇಳು ಲೋಕಗಳನ್ನು ಆಳಿ ಬಾಳಿ ಬಂದವರು ಈಗ ಬಹಳ ಹಸಿವಾಗುತ್ತಿದೆ. ಬಸವಣ್ಣನವರ ಆರೋಹಣೆಯಲ್ಲಿ ನಮಗೊಂದಿಷ್ಟು ಊಟ ಸಿಕ್ಕಿದರೆ ಬಹಳ ಪುಣ್ಯಬರುತ್ತದೆ. ನಿಮಗೆ ನಿಮ್ಮ ಅಣ್ಣನವರಿಗೆ' ಎಂದು ಹೇಳಿದ್ದಕ್ಕೆ ಪಹರೆಯವರು ಒಪ್ಪದೇ ಹೋಗುತ್ತಾರೆ.

ಆಗ ಆದಿ ಪರಂಜ್ಯೋತಿ 'ಬಸವಣ್ಣನವರು ದಿನವೂ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜನರಿಗೆ ಲಿಂಗಧಾರಣೆ ಮಾಡಿಸಿ ಅನ್ನ ನೀಡುವ ನಿಮ್ಮ ಬಸವಣ್ಣನವರಿಗೆ ನನ್ನೊಬ್ಬನಿಗೆ ಅನ್ನ ನೀಡಿ ಬಿಟ್ಟರೆ ಪಾಪ ಬಂದು ಬಿಡುವುದೇ?' ಎಂದು ಜರಿದು, ಮೂದಲಿಸಿ ಅವರ ಕೈಯಿಂದ ದೊಣ್ಣೆಯ ಪೆಟ್ಟುಗಳನ್ನು ತಿಂದುಕೊಂಡು ನನಗೆ ಬಸವನ ಮಹಾಮನೆಯೇ ಬೇಡವೆಂದುಕೊಂಡು ಹರಳಯ್ಯನವರ ಮನೆಯ ಹಿತ್ತಲಿನ ತಿಪ್ಪೆಯ ಮೇಲೆ ಬಂದು ತಂಗಿಬಿಡುತ್ತಾರೆ. ಅಲ್ಲಿನ ಕೋಳಿಗಳು ಕೂಗುತ್ತವೆ.[೧]

ಇತ್ತ ಬಸವಣ್ಣನವರು ಮತ್ತು ನೀಲಮ್ಮನವರು ದೈವಮನಸ್ಕರಾಗಿ ಕುಳಿತಿರಲು ಪಹರೆಯವರು ಪರಂಜ್ಯೋತಿಯವರಿಗೆ ಹೊಡೆದ ಏಟುಗಳು ಇವರಿಗೆ ತಾಗಿ ಎಚ್ಚರಗೊಂಡ ಅಣ್ಣ ಬಸವಣ್ಣನವರು ತಮ್ಮ ಪತ್ನಿಯ ಜತೆಗೂಡಿ ನಾಲಿಗೆ ಇಲ್ಲದ ಚಕ್ಕಳೆ ಗಂಟೆಯ ಶಬ್ದವನ್ನು ಕೇಳಕೇಳುತ್ತಾ ಊರೆಲ್ಲ ಹುಡುಕುತ್ತಿಲು ಕಟ್ಟಕಡೆಗೆ ವಿಶ್ವ ಅನಾದಿ ಜಗದ್ಗುರು ಅಲ್ಲಮ ಪ್ರಭುಗಳು ಮಹಾಶರಣ ಹರಳಯ್ಯನವರ ಮನೆಯ ಹಿತ್ತಲಿನ ತಿಪ್ಪೆಯ ಮೇಲೆ ಮಲಗಿ ಆನಂದಿಸುತ್ತಾ ಇರುವ ದಿವ್ಯದೇದೀಪ್ಯಮಾನ ಪರಂಜೋತಿ ತಾವಾಗಿ ಕಾಣುತ್ತಾರೆ. ಹೆಗಲಮೇಲಿದ್ದ ಎಮ್ಮೆ ಕರುವಿನ ಚಕ್ಕಳ ಜೀವಧರಿಸೆ ಬದಿಯಲ್ಲೆ ಆಡುತ್ತಿರುತ್ತದೆ. ಇಷ್ಟು ದಿನ ಕಾದು ಬಳಲಿದ್ದ ಅಣ್ಣನವರು ಪ್ರಭು ದೊರಕಿದ ಸಂತಸದಲ್ಲಿ ಬಸವಣ್ಣನವರ ಸಪತ್ನೀಕರಾಗಿ ಪರಂಜ್ಯೋತಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ದೇವನನ್ನನ್ನು ಇಲ್ಲಿಯವರೆಗೆ ಪರೀಕ್ಷಿಸಿದ್ದು ಸಾಕು. ಈಗಲಾದರು ನನ್ನ ಮೇಲೆ ದಯೆತೋರಿ ನಿಮ್ಮ ಪಾದ ಧೂಳಿನಿಂದ ಪವಿತ್ರ ಬೇಕಾಗಿರುವ ಮಹಾಮನೆಗೆ ದಯಮಾಡಿಸಿ ಎಂದು ಪ್ರಾರ್ಥಿಸುತ್ತಾರೆ. ಆಗ ಸತಿಪತಿಗಳಿಬ್ಬರು ಪ್ರಭುವನ್ನು ಎತ್ತಿ ಕರೆದು ತರಲೆಂದು ತೀರ್ಮಾನಿಸಿ ಕೈಗಳನ್ನು ಹಿಡಿದು ಎಳೆದರೆ ಕೈಗಳೇ ಹಿಂಜಿಬರುತ್ತವೆ. ಕಾಲುಗಳನ್ನು ಹಿಡಿದರೆ ಕಾಲುಗಳೇ ಹಿಂಜಿಬರುತ್ತವೆ. ಈ ನಿಲಾವಿಲಾಸವನ್ನರಿತ ನೀಲಮ್ಮನವರು ರುಂಡಮುಂಡ ಕೈಕಾಲುಗಳೇ ಬೇರೆಬೇರೆಯಾಗಿ ಕೈಗೆ ಸಿಕ್ಕ ಪ್ರಭುವನ್ನು ಪತಿಯ ಹೆಗಲ ಮೇಲಣ ವಸ್ತ್ರದಿಂದ ಕಟ್ಟಿಕೊಂಡು ನೆತ್ತಿಯ ಮೇಲೆ ಹೊತ್ತುಕೊಂಡು

೧. ಲೇಖಕರು: ಟಿ.ಎಸ್.ರಾಜಪ್ಪ, ರಾಚಪ್ಪಾಜಿ ಮಂಜುಳಾ ದೇವಿ ಎಂ.ಎಸ್ ಮತ್ತು ರೂಪರಾಜ್ ಎಂ.ಎಸ್, ಧರೆಗೆ ದೊಡ್ಡವರು'

ಬರುವಂತೆ ತಮ್ಮ ಪತಿಯವರಿಗೆ ಭಿನ್ನವಿಸಿಕೊಂಡು ತಾವು ಎಮ್ಮೆ ಕರುವನ್ನು ಅಟ್ಟಿಕೊಂಡು ಸುರಪಾನದ ಗಡಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ಮಹಾಮನೆಗೆ ಬರುತ್ತಾರೆ. ಬಂದು ಉರಿಗದ್ದಿಗೆಯ ಮೇಲೆ ಐಕ್ಯವಾದ ಗುರುವಿನ ಶರೀರವನ್ನು ಮೂರ್ತಗೊಳಿಸಿ ಸಪತ್ನೀಕರಾಗಿ ನೀಲಲೋಚನೆಯೊಡಗೂಡಿ ಕರ್ಪೂರದ ಆರತಿ ಬೆಳಗುತ್ತಾ

"ಕಾವಿಯ ಬಟ್ಟೆ ಗಂಟುಬಿಚ್ಚಿ
ಸತಿಪತಿಯರು ಕರ್ಪೂರವ ಹಚ್ಚಿ
ಅಂಗೈಮೇಲೆ ಹಚ್ಚಿಕೊಂಡು
ಸ್ವಾಮಿಗೆ ಮಂಗಳಾರತಿ ಎತ್ತಿದರು
ನಿಮ್ಮ ನಿಜ ರೂಪವ ತೋರಬೇಕು
ಧರ್ಮಗುರುವೇ – ಅಂದರಂತೆ"[೧]

ಬಸವಣ್ಣ ನೀಲಮ್ಮನವರ ನಿಜಭಕ್ತಿಗೆ ಮೆಚ್ಚಿದ ಧರೆಗೆ ದೊಡ್ಡವರು ತಮ್ಮ ನಿಜರೂಪವನ್ನು ತೋರಿದರು. ಹೀಗೆ ಬಸವಣ್ಣನವರ ದೃಢಮನವನ್ನು ಪರೀಕ್ಷಿಸಲೆಂದು ಕಲ್ಯಾಣಮಂಟಪಕ್ಕೆ ಬಂದು ಅಲ್ಲಿ ಬಸವಣ್ಣನವರ ಹಾಗೂ ಅವರ ಶರಣರ ಸತ್ವಪರೀಕ್ಷೆ ಮಾಡಿ ಭಕ್ತಿಯಲ್ಲಿ ಬಲಿತವರಿಗೆ ಮುಕ್ತಿ ಮಾರ್ಗವನ್ನು ತೋರಿ ಬಲಿಯಾದವರಿಗೆ ವಿವೇಕವನ್ನು ಹೇಳಿ ತಮ್ಮ ಹಿರಿಮೆ-ಗರಿಮೆಗಳನ್ನು ಮೆರೆಯುತ್ತಾರೆ. ಅಲ್ಲಿ ಬಸವಣ್ಣನವರು ಭಯಭಕ್ತಿಯಿಂದ ಧರೆಗೆ ದೊಡ್ಡವರನ್ನು ಉರಿಗದ್ದಿಗೆ ಮೇಲೆ ಕುಳ್ಳಿರಿಸಿ ಆನಂದಪಡುತ್ತಾರೆ. ಆಗ ಪ್ರಭು ದೇವರು ಲೋಕದಲ್ಲಿ ಶರಣ ಮಹತ್ವವನ್ನು ಹೇಗೆ ಪ್ರಚಾರ ಮಾಡಬೇಕು. ಹೇಗೆ ಶಿವಾಚಾರವನ್ನು ಉಳಿಸಿ ಬೆಳೆಸಬೇಕು ಎಂದೆಲ್ಲಾ ಹೇಳಿ ಬಸವಣ್ಣನವರನ್ನು ಅವರ ಅಪಾರ ಶಿಷ್ಯರನ್ನು ಅನುಗ್ರಹಿಸುತ್ತಾರೆ. ತಾವು ಜ್ಞಾನ ವೈರಾಗ್ಯ ಚಿತ್ ಕಲೆಯ ಜ್ಯೋತಿ ಪ್ರಕಾಶಕರಾಗಿ ಮೆರೆಯುತ್ತಾರೆ.

ಸ್ವಲ್ಪ ಕಾಲ ಮಹಾ ಮನೆಯಲ್ಲಿ ತಂಗಿದ್ದ ಪ್ರಭುದೇವರು ಒಂದು ದಿನ ನೀಲಮ್ಮನವರು ಒಕ್ಕಳ ಅಕ್ಕಿ ಹಾಕಿ ಒಂದು ಬದನೆಕಾಯಿ ಹಾಕಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗಣ್ಯರುಗಳಿಗೆಂದು ಅಡಿಗೆ ಮಾಡಿದರು. ಜಂಗಮರೆಲ್ಲಾ ಸಾಲಾಗಿ ಬಂದು ಊಟಕ್ಕೆ ಕುಳಿತರು. ನೀಲಮ್ಮನವರು ಎಲೆ ಹಾಕಿ ಊಟಕ್ಕೆ ಬಡಿಸಿದರು.

---

೧. ಕುವೆಂಪು, ಶ್ರೀರಾಮಾಯಣದರ್ಶನಂ, ಪು.೧೨೩.

ಬಸವಣ್ಣನವರ ಪರಮಾಪ್ತರೆನಿಸಿದ ಬಾಲಕ ರೇಚಪ್ಪನು ಭೋಜನಕ್ಕೆ ಕುಳಿತಿದ್ದ ಪಂಕ್ತಿಗೆ ವೀಳ್ಯೆದೆಲೆ ಕೊಡುವಾಗ ಒಂದು ಕರಿಯ ಎಲೆ ಸಿಕ್ಕಿತು. ಅದನ್ನು ತನ್ನ ಕಿರುಬೆರಳಿಗೆ ಸಿಕ್ಕಿಸಿಕೊಂಡು ಎಲ್ಲರಿಗೂ ಒಳ್ಳೊಳ್ಳೆಯ ವೀಳ್ಯೆದೆಲೆ ಕೊಡುತ್ತಾ ಬಂದು ಕುರೂಪಿಯಾಗಿದ್ದ ಜಂಗಮನೊಬ್ಬನಿಗೆ ಕಿರುಬೆರಳಿನಲ್ಲಿ ಸಿಕ್ಕಿಸಿಕೊಂಡಿದ್ದ ಕರಿಯ ಎಲೆಯನ್ನು ಕೊಟ್ಟನು. ಇದು ಕಲ್ಯಾಣದಲ್ಲಿ ನಡೆದ ಬಲ್ಲವರ ವಂಚನೆ ಎಂದು ಅಲ್ಲಿದ್ದವರಲೊಬ್ಬ ಎತ್ತಾಡಿದ ಬಸವಣ್ಣನವರು ಈ ಅನ್ಯಾಯವನ್ನು ಎದುರಿಸಲಾರದೆ.

ಈ ಕಲ್ಯಾಣದ ಬಾಳು ನಮಗೆ
ಸಾಕಾಯ್ತು ಎಂದರಂತೆ!

ಆಗ ಪರಂಜ್ಯೋತಿ ಧರೆಗೆ ದೊಡ್ಡವರು ಅವರ ಬಳಿಗೆ ಬಂದು ನಿಂತರು. ಬಸವಣ್ಣನವರು ಅವರ ಪಾದಗಳನ್ನು ತಬ್ಬಿಕೊಂಡು

'ನನ್ನಾದಿ ಕಲ್ಯಾಣದಲ್ಲಿ ಎಂದೂ ಹುಸೆ ಇರೆನಿಲ್ಲ ನನ್ನ ಗುರಸ್ವಾಮಿ ಬಂದ ದಿವಸವೆ ಬಲ್ಲವರ ವಂಚನೆ ನಡೆದುಹೋಯಿತು. ಇಂಥ ವಂಚನೆ ನಡೆದ ಮೇಲೆ ನಾನಿನ್ನು ಈ ಕಲ್ಯಾಣದಲ್ಲಿ ಇರಲಾರೆ' ಎಂದರು. ಅದಕ್ಕೆ ಧರೆಗೆ ದೊಡ್ಡವರು.

'ಬಸವಣ್ಣನವರೇ ನಾವು ಬರಲಾಗಿ ನೀವು ಗುರುಮಠ ಬಿಟ್ಟು ಯಾಕೇ ಹೋಯ್ತಿರಪ್ಪ ನಿಮ್ಮ ಕಲ್ಯಾಣವನ್ನು ನೀವೇ ಪರಿಪಾಲನೆ ಮಾಡಿಕೊಂಡು ಹೋಗಿಯಪ್ಪ ನಾವೇ ಮುಂದಕ್ಕೆ ಹೋಗ್ತಿವಿ' ಎಂದರು.

'ಇಲ್ಲಾ ಗುರುವೇ ನೀವಿದ್ದರೂ ಸರಿ ಮುಂದಕ್ಕೆ ದಯ ಮಾಡಿದರೂ ಸರಿ ನಾವು ಮಾತ್ರ ಕಲ್ಯಾಣದಲ್ಲಿ ಇರೋದಿಲ್ಲ ಹಾಗಾದರೆ ಈಗ ವಂಚನೆ ಮಾಡಿರೋ ಈ ನಿಮ್ಮ ರೇಚಣ್ಣನವರನ್ನು ಏನು ಮಾಡ್ತಿರಪ್ಪ? ಅವರನ್ನು ಕರೆದುಕೊಂಡು ಹೋಗ್ತಿರೋ ಇಲ್ಲಾ ಇಲ್ಲೇ ಬಿಟ್ಟು ಹೋಯ್ತಿರೋ'

'ವಂಚನೆ ಮಾಡಿದೋರ್ನ ಹ್ಯಾಗೆ ಕರೆದುಕೊಂಡು ಹೋಗಲಿ ಗುರುವೆ?'

'ಹಾಗಾದ ಮೇಲೆ ಅವನನ್ನು ನೀವು ಅನಾಥನನ್ನಾಗಿ ಮಾಡಬೇಡಿ ನಾವು ಉತ್ತರದ ದೇಶದಲಿ ಉದ್ಭವವಾಗಿ ಇಲ್ಲೀವರೆಗೂ ನಾವೊಬ್ಬರೇ ಬಂದೇವಪ್ಪ ವಂಚನೆ ಮಾಡಿದ ಈ ಬಾಲಕನನ್ನು ನನ್ನ ಜೊತೆಗೆ ಕಳುಹಿಸುತ್ತೀರಾ ಬಸವಣ್ಣ?'

'ಸ್ವಾಮಿ ರೇಚಣ್ಣನವರು ಹಾಗೂ ಅವರ ತಂಗಿ ಚನ್ನಾಜಮ್ಮನವರು ನನಗೆ ಹೊಟ್ಟೇಲಿ ಹುಟ್ಟಿದ ಮಕ್ಕಳಿಗಿಂತ ಹೆಚ್ಚು ಅವರ ತಂದೆ ಕೂಡಲ ಸಂಗಮಯ್ಯ ತಾಯಿ ಸುರಮ್ಮನವರು ಈ ಕೂಸುಗಳನ್ನು ನನ್ನ ಕೈಗೆ ಹಾಕಿ ಹೋಗುವಾಗ ರೇಚಣ್ಣನಿಗೆ

ಕಲ್ಯಾಣ ಮಾಡಿ ಗುರುವೇ ಎಂದು ವಿವಾಹಾದಿ ಜವಾಬ್ದಾರಿಗಳನ್ನು ನಮಗೆ ವಹಿಸಿದ್ದಾರೆ' ಆದ್ದರಿಂದ ನಾವೂ ಕೂಡ ಅವರಿಗೆ ಮಾತುಕೊಟ್ಟಿದ್ದೇವೆ. ಈಗ ರೇಚಣ್ಣನನ್ನು ಚೆನ್ನಾಜಮ್ಮನನ್ನು ಎತ್ತಿ ನಿಮ್ಮ ಮುತ್ತಿನ ಜೋಳಿಗೆಗೆ ದತ್ತು ಕೊಡುತ್ತಿದ್ದೇನೆ. ಹೀಗೆ ಕೊಟ್ಟರೆ ರೇಚಪ್ಪನನ್ನು ಏನು ಮಾಡುತ್ತೀರಿ ಗುರುವೆ?' ಎಂದಾಗ ಅವರೇ ಮುಂದೆ ಶಿಷ್ಯರಾಗಿ ನಮ್ಮ ಲೀಲಾ ವಿನೋದಗಳನ್ನು ಜಗತ್ತಿಗೆ ಹರಡುತ್ತಾರೆ ನಾಳೆ ದಿವಸ ಎಡತೊರೆ, ರಾಮಸಮುದ್ರ, ತಪ್ಪೂಟೂರು, ಬೇಲಿ ಹರಿಯುವ ಕಾವೇರಿ ನದಿಯ ದಂಡೆಯಲ್ಲಿ ಇವರಿಗೆ ನಿಜ ಗದ್ದುಗೆ ಮಾಡಿ

ಕಪ್ಪಡಿ ರಾಚಪ್ಪಾಜಿ ಅಂತ
ನಾಮಾಂಕ್ತೆ ಮಾಡುತೀನಿ
ನಾನಾ ಕಡೆ ಕಾರ್ಯದ ಜನವೆಲ್ಲಾ
ಎತ್ತಿ ಕೈಯ ಮುಗಿಯಬೇಕು
ವರುಷಕೆ ಒಂದು ಸಾರಿ
ಶಿವರಾತ್ರಿಯಿಂದ ಹಿಡಿದು
ಉಗಾದಿಯ ತನಕವೂ
ತಿಂಗಳ- ಜಾತುರೆ ಮಾಡಸ್ತೀನಿ
ಕಟ್ಟಿದ ಕಾಣಿಕಗೆ ಇತರದ್ದು
ಬಿಟ್ಟ ಜನ್ನಿಗೆ ಇವರದು
ನರ ಮಾನವರ ಪೂಜೆ ತಕ್ಕೊಂಡು
ಸಾಮ್ರಾಣಿ ಊಳಿಗದ ಜೊತೆಗೆ
ಹಣ್ಣು-ಕಾಯಿ ಊಳಿಗೆ ಇವರದಪ್ಪ

ಎಂಬ ಮಾತನ್ನು ಕೇಳಿ ಬಸವಣ್ಣನವರಿಗೆ ಸಂತೋಷವಾಗಿ ರಾಚಪ್ಪಾಜಿ ಮತ್ತು ಚೆನ್ನಾಜಮ್ಮನವರನ್ನು ನಿಮ್ಮ ಮನೆಗೆ ಕರೆದುಕೊಂಡು ಹೋಗಿ ಎಂದರು.

ಇದರಿಂದ ಪರಂಜ್ಯೋತಿ ಪ್ರಭುಗಳಿಗೂ ಕೂಡ ಸಂತೋಷವಾಯಿತು 'ಇನ್ನು ಯಾರಾದರೂ ನನ್ನ ಜೊತೆಯಲ್ಲಿ ಬರುವವರಿದ್ದೀರಾ?' ಎಂದಾಗ 'ಹೌದು ಗುರುವೇ ಇನ್ನೊಬ್ಬ ಇದ್ದಾನೆ ಶಿವರಂತೆ ಮಡಿ ಮಾಡುತ್ತಿದ್ದಂತಹ ಮಡಿವಾಳ ಮಾಚಪ್ಪನವರು ಸುಳ್ಳಾಡಿ ತಪ್ಪಿದ್ದಾರೆ' ಎಂದಾಗ 'ಹಾಗಾದರೆ ಅವರನ್ನು ನನ್ನ ಜೊತೆಯಲ್ಲಿ ಕಳುಹಿಸಿಕೊಡಿ' ಎನ್ನುತ್ತಾರೆ.

ಆಗ ಮತ್ತೆ ಬಸವಣ್ಣನವರು 'ಮಾಚಯ್ಯನವರನ್ನು ನಿಮ್ಮ ಜೊತೆ ಕಳುಹಿಸಿಕೊಟ್ಟರೆ ಅವರನ್ನು ಏನು ಮಾಡುತ್ತೀರಿ ಗುರುವೇ?'

'ನಾವು ಅವರಿಗೆ ಮೋಸ ಮಾಡುವುದಿಲ್ಲಪ್ಪ ನಾಳೆ ದೂರು ಬೆಟ್ಟದ ಬಲದ ಪಕ್ಕದಲ್ಲಿ ಕರ್ಲೆ ಕೊಂಪೆ ಬೊಪ್ಪೇಗೌಡನ ದೊಡ್ಡಿಯಿದೆ. ಆ ದೊಡ್ಡಿಯನ್ನು ಬೊಪ್ಪೇಗೌಡನ ಪುರದ ಮಠ ಮಾಡಿ ಆ ಜಾಗದಲ್ಲಿ ನಾನು ನೆಲೆಗೊಳ್ಳುತ್ತೇನೆ. ಅಲ್ಲಿಂದ ಪಡುವಲ ಪಕ್ಕದಲ್ಲಿ ಮುತ್ತುನಳ್ಳಿ ಗ್ರಾಮವಿದೆ. ಆ ಗ್ರಾಮವೆಂಬುದು ನಾಳೆ ಮುಟ್ಟನಹಳ್ಳಿ ತೋಪಾಗುತ್ತದೆ. ಆ ಮುಟ್ಟನಹಳ್ಳಿ ತೋಪಿನಲ್ಲಿ

ಇವರ ಫಲಾರದಯ್ಯ ಎಂದು – ನಾವು
ನಾಮಾಂತವ ಮಾಡುತ್ತೀವಿ!

ಎಂದು ಹೇಳಿದರು. ಬಸವಣ್ಣನವರು ಮಾಚಯ್ಯನವರನ್ನು ಪರಂಜ್ಯೋತಿಯವರ ಜೊತೆ ಕಳುಹಿಸಿಕೊಡಲು ಒಪ್ಪಿದರು. ಅಲ್ಲದೆ ಅವರು ನೀಲಮ್ಮನವರನ್ನು ಕರೆದುಕೊಂಡು ಕಲ್ಯಾಣ ಪಟ್ಟಣವನ್ನು ಬಿಟ್ಟು ಹೋಗುತ್ತಿರುವುದರಿಂದ ಇವರೆಲ್ಲರ ಕಣ್ಣು ತಪ್ಪಿಸಿ ಹೊರಟೇ ಬಿಟ್ಟರು. ಆದರೆ ಈ ಮೂವರು ಕಲ್ಯಾಣದಲ್ಲಿ ಬಸವಣ್ಣನವರನ್ನು ಕಾಣದೆ ಕಳವಳದಿಂದ ಅಲ್ಲಲ್ಲಿ ಹುಡುಕುತ್ತಾ ಹುಡುಕುತ್ತಾ ಮಾರ್ಗ ಮಧ್ಯದಲ್ಲಿದ್ದ ಬೇವಿನ ಕಟ್ಟೆ ಜಗತಿಯ ಮೇಲೆ ದಣಿವಾರಿಸಿಕೊಳ್ಳುತ್ತಿದ್ದ ಬಸವಣ್ಣನವರನ್ನು ಕಂಡು ಸಂತೋಷಗೊಂಡು ಅವರ ಪಾದಗಳ ಮೇಲೆ ಬಿದ್ದು 'ಗುರುವೆ ಇಲ್ಲಿಯವರೆಗೂ ನಮ್ಮನ್ನು ಕಾಪಾಡಿದಿರಿ ಈಗ ಕೈಲಾಸಕ್ಕೆ ಹೋಗುವ ಸಮಯದಲ್ಲಿ ನಮ್ಮನ್ನು ಕಣ್ತಪ್ಪಿಸಿರಬಹುದೇ?' ಎಂದು ಕಂಬನಿ ತಂದುಕೊಂಡರು ಆಗ ಬಸವಣ್ಣನವರು ಇವರನ್ನು ಆಗಲೇ ಧರೆಗೆ ದೊಡ್ಡವರಿಗೆ ಕೊಟ್ಟಾಗಿದೆಯಲ್ಲಾ ಎಂದು ಚಿಂತಿಸಿ.

'ಇಲ್ರಪ್ಪ ನಾನು ನಿಮ್ಮನ್ನು ವಂಚಿಸಿ ಹೋಗುತ್ತಿಲ್ಲಾ ನೀವು ಸಹಾ ನನ್ನ ಜೊತೆಯಲ್ಲಿ ಬರಲಿ ಎಂದೆ ಕಾಯುತ್ತಾ ಕುಳಿತ್ತಿದ್ದೆವು. ಅದಿರಲಿ ಒಂದು ಕೆಲಸ ಮರೆತು ಊರು ಬಿಟ್ಟು ಬರುವ ಆತುರದಲ್ಲಿ ನಮ್ಮ ಈ ಬುತ್ತಿಗಟ್ಟಿಯನ್ನು ಮರೆತು ಬಂದಿದ್ದೆವಪ್ಪಾ. ಈಗ ನೀವುಗಳು ಬೇಗನೆ ಹೋಗಿ ತೆಗೆದುಕೊಂಡು ಬನ್ನಿ. ನೀವು ಬರುವ ತನಕ ನಾವಿಲ್ಲಿ ಕಾಯುತ್ತಿರುತ್ತೇವೆ ಬಂದ ಮೇಲೆ ಒಟ್ಟಿಗೆ ಹೋಗುವಾ' ಈ ಮಾತನ್ನು ನಂಬಿದ ರೇಚಣ್ಣ ಹಾಗೂ ಮಾಚಯ್ಯನವರು ಗುರು ಮಠಕ್ಕೆ ಹೊದರು. ಅವರು ಹೋದ ಸ್ವಲ್ಪ ಹೊತ್ತಿಗೆ ಚೆನ್ನಾಜಮ್ಮನನ್ನು ಕುರಿತು ಅಣ್ಣನವರು 'ಕಂದಾ ಕುಡಿಯಲು ಒಂದು ಚೆಂಬು ನೀರು ಬೇಕಂತೆ ತಕ್ಕೊಂಡು ಅವರೊಂದಿಗೆ ಬಾ ನನ್ನ ಕಂದಾ' ಎಂದು ಹೇಳಿ ಕಳುಹಿಸಿದರು.

ಈ ಮೂವರು ವಿಭೂತಿ ಗಟ್ಟಿ ಹಾಗೂ ನೀರನ್ನು ತರುವಷ್ಟರಲ್ಲಿ ಬಸವಣ್ಣನವರು ಯಾವ ಕಡೆಗೆ ಹೋದರೆಂಬುದು ತಿಳಿಯದಂತೆ ದೂರ ದೂರಸಾಗಿ ಹೊಗಿದ್ದರು. ಅಲ್ಲದೆ ಬೇವಿನಕಟ್ಟೆಯ ಜಗತಿಯು ಮೇಲೆ ಒಂದು ಶಾಸನ ಬರೆದಿಟ್ಟು ಹೋಗಿದ್ದರು. ಅದೇನೆಂದರೆ.

ಈ ಸಾಸನಾವ ಮಾತ – ನೀವು
ಮೀರಿ ಮುಂದಕ್ಕೆ ಬಂದರೆ
ತಲೆ ಸಾಸರ ಹೋಳಾಗಲಪ್ಪ

ಶಾಸನವ ಓದಿದ ಮೂವರಿಗೂ ದುಃಖ ನಿಮ್ಮನ್ನು ನಂಬಿದ್ದ ಶರಣರನ್ನು ಬಿಟ್ಟು ಹೋಗಬದೆ ಗುರು? ಎಂದು ಗೋಳಾಡಿದರು. ಅಷ್ಟು ಹೊತ್ತಿಗೆ ಇವರಿಬ್ಬರನ್ನು ಹುಡುಕುತ್ತ ಧರೆಗೆ ದೊಡ್ಡವರು ಅಲ್ಲಿಗೆ ಬಂದರು.

ಕಲ್ಯಾಣದ ಕಡೇ ಬಾಗಿಲಿಗೆ ಬಂದಾಗ ಅಲ್ಲಿಯೇ ವೀರಭದ್ರನು ಹಲಗೆಯನ್ನು ಗೇಯುತ್ತ ಕುಳಿತಿದ್ದ ಬಾಚಿ ಬಸವಯ್ಯ ಓಡೋಡಿ ಬಂದು ಪ್ರಭುವಿನ ಪಾದಗಳಿಗೆ ಎರಗಿ 'ನನ್ನನ್ನು ನಿಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ' ಎಂದು ಪ್ರಾರ್ಥಿಸಿಕೊಳ್ಳುತ್ತಾನೆ. ಅದಕ್ಕೆ ಪ್ರಭು 'ಮಗು ನಿನ್ನ ಕರ್ಮ ಇನ್ನು ಸವೆದಿಲ್ಲ ನೀನು ಮುಂದಣ ಜನ್ಮದಲ್ಲಿ ಮುದ್ದೋಜಿ ಹಾಗೂ ಲಿಂಗಮ್ಮನವರ ಹೊಟ್ಟೆಯಲ್ಲಿ ಕೆಂಪಾಚಾರಿ ಎಂಬ ಹೆಸರಿನಿಂದ ಐಬೋಗದಿಂದ ಬಾಳ್ವೆ ನಡೆಸುತ್ತಾ ಇರು. ನಿನಗೆ ಏಳನೇ ವರ್ಷ ಪ್ರಾಪ್ತವಾಗುವ ಸರಿಸುಮಾರಿಗೆ ನಾನು ಬಂದು ನಿನ್ನನ್ನು ದತ್ತು ಪಡೆದು ಸೆಸು ಸಿದ್ದಾಪ್ಪಾಜಿ ಎಂದು ಹೆಸರು ಕೊಡ್ತಿನಪ್ಪ' ಎಂದು ಹೇಳಿ ಹರಸಿ ಆ ಕೂಡಲೇ ಬಾಚಿ ಬಸವಯ್ಯನನ್ನು ಪ್ರಸ್ತುತ ಕಾರ್ಯದಿಂದ ಬೇರ್ಪಡಿಸಿ ಮುದ್ದೋಜಿ ಹಾಗೂ ಲಿಂಗಮ್ಮನವರ ಗರ್ಭದಲ್ಲಿ ಪ್ರತಿಷ್ಠಾಪಿಸಿ ಮುಂದೆ ಹೊರಡುತ್ತಾರೆ.

ಉತ್ತರದಿಂದ ದಕ್ಷಿಣದ ಕಡೆಗೆ ಹೊರಟ ಧರೆಗೆ ದೊಡ್ಡವರು ಸಖರಾಯಪಟ್ಟಣದ ರಾಜಕುಮಾರನನ್ನು ದತ್ತು ಪಡೆದುಕೊಂಡರು. ಅಲ್ಲಿಂದ ಕೊಡೇಕಲ್ಲಿಗೆ ಎಳೆಯ ಶಿಷ್ಯರನ್ನು ಕಟ್ಟಿಕೊಂಡು ಗಾವುದ ಗಾವುದ ದುರ ನಡೆದರು. ಬೇಸಿಗೆಯ ಬಿಸಿಲು ಬಿಸಿಲಿನ ತಾಪಕ್ಕೆ ಮಕ್ಕಳು ಬಳಲಿ ಬೆಂಡಾದರು. ನಾಲಗೆ ಒಣಗಿ ಮಕ್ಕಳು ಸೋತು ಸುಣ್ಣವಾದರು ದಾರಿಯಲ್ಲೊಂದು ಕಲ್ಲು ಧರೆಗೆ ದೊಡ್ಡವರನ್ನು ಸುಧಾರಿಸಿಕೊಳ್ಳಲು ಕರೆಯುವಂತಿತ್ತು. ಮಕ್ಕಳಿಗೆ ಆಯಾಸ ಸ್ವಾಮಿ ಪರಿಹಾರವಾಗಲೆಂದು ಕೋಡು ಬಂಡೆಯ ಮೇಲೆ ಬಿಡಾರ ಹೂಡುತ್ತಾರೆ. ಆಗ ಕೋಡು ಬಂಡೆಯು ಕೊಡೆ ಕೊಡೆಯಾಗಿ ಬೆಳೆದು ಅವರಿಗೆ ಬಿಡಾರ ಮಾಡಿಕೊಳ್ಳಲು ವ್ಯವಸ್ಥೆ ಮಾಡುತ್ತದೆ ಅಲ್ಲೆ

ಹುಲ್ಲೇ ಚರ್ಮವನ್ನು ಹಾಸಿಕೊಂಡ ಹುಲಿಯ ಚರ್ಮವನ್ನು ಹೊದ್ದು ಮಲಗುವಾಗ ಗುರುವಿನ ಪಾದದ ಹತ್ತಿರ ಫಲಾರದಯ್ಯ ಚೆನ್ನಾಜಮ್ಮನವರು ಮಲಗಿದರು. ಆದರೆ ಕಿಡಿಗಣ್ಣ ರಾಚಪ್ಪಾಜಿ ಮಾತ್ರ ಹಾಗೆಯೇ ಕುಳಿತಿರುವಾಗ ಧರೆಗೆ ದೊಡ್ಡವರು ರಾಚಪ್ಪಾಜಿಯನ್ನು ನೋಡಿ 'ಕಂದ ನಾನು ಸೋಲುಪಚಗರ್ತಿನಪ್ಪ ನೀನು ಯಾವ ಕಡೆಗೆ ಹೋದರು ಬಡಗಲ ಕಡೆಗೆ ಹೋಗಬೇಡ ನನ ಕಂದಾ' ಎಂದು ಸೂಚನೆ ಕೊಟ್ಟರು. ರಾಚಪ್ಪಾಜಿಯವರು ಹಾಗೆ ಆಗಲಿ ಎಂದು ತಲೆ ಅಲ್ಲಾಡಿಸಿ ಹಾಗೆ ಸುತ್ತಾಡಿಕೊಂಡು ಬರುತ್ತೇನೆಂದು ಹೇಳಿ ಗುಡಾರದಿಂದ ಹೊರ ನಡೆದರು.

ಅಷ್ಟು ದೂರ ಹೋಗುವಷ್ಟರಲ್ಲಿ ಗುರುಗಳು ಬಡಗಲ ದಿಕ್ಕಿಗೆ ಹೋಗಬೇಡ ಎಂಬ ಮಾತು ನೆನಪಾಗಿ ಯಾಕಿರಬಹುದು? ಇದನ್ನು ಪರೀಕ್ಷಿಸಿಯೇ ತೀರಬೇಕೆಂದು ಕೊಂಡು ಬಡಗಲ ದಿಕ್ಕಿನೆಡೆಗೆ ಹೊದರು.

ಬಡಗಲು ದಿಕ್ಕಿನಲ್ಲಿ ವಿಜಯನಗರ ಕೋಟೆ ಇದೆ. ಆ ವಿಜಯನಗರದಲ್ಲಿ ನೋರೊಂದೊಕ್ಕಲು ಗಾರುಡಿಗರು ಇದ್ದಾರೆ ಅವರು ರಣಮೋಡಿ, ರಾಜಮೊಡಿಗಳನ್ನು ಮಾಡಬಲ್ಲ ನಿಸ್ಸೀಮರು ಇಂಥ ನೂರೊಂದು ಗಾರುಡಿಗರ ಮಕ್ಕಳು ದನ, ಕರು, ಕುರಿಗಳನ್ನು ಮೇಯಿಸುತ್ತಾ ಬಿಟ್ಟುಕೊಂಡು ಗೋಲಿ ಗಜ್ಜುಗ ಆಡುತ್ತಿರುವುದು ಗೊಚರಿಸುತ್ತದೆ. ಅವರೊಡನೆ ಆಟವನ್ನಾದರೂ ಆಡಬಾರದೇಕೆ? ಎಂದು ಅವರು ಓಡೋಡಿ ಬಂದು ಆ ಮಕ್ಕಳೊಡನೆ ಆಟವಾಡಿ ಅವರುಗಳ ಆಟದ ಸಾಮಾನುಗಳನ್ನು ಗೆದ್ದುಕೊಂಡರು. ಆಗ ಗಾರುಡಿಗರ ಮಕ್ಕಳಿಗೆ ಕೋಪ ಬಂದು ಎಂದು ಯಾರು ನಮ್ಮ ಜೊತೆಯಲ್ಲಿ ಆಟವಾಡಿ ಗೆದ್ದಿರಲಿಲ್ಲ. ಇಂದು ಪರದೇಶಿ ಹುಡುಗ ಗೆದ್ದಿದ್ದಾನೆ. ಆ ಗಾರುಡಿಗ ಮಕ್ಕಳಿಗೆ ಎಂದು ಸೋತು ಗೊತ್ತಿರಲಿಲ್ಲವಾಗಿ "ಏಯ್ ನೀನು ಗೆದ್ದಿರುವ ಆಟದ ಸಾಮಾನುಗಳನ್ನು ಹಿಂದಕ್ಕೆ ನಮಗೆ ಕೊಟ್ಟು ಬಿಡು ಇಲ್ಲದಿದ್ದರೆ ಈ ವಿಷಯವನ್ನು ನಮ್ಮ ಹೆತ್ತಯ್ಯ ಮುತ್ತಯ್ಯರಿಗೆ ಹೇಳುತ್ತೇವೆ" ಎಂದು ಹೆದರಿಸುತ್ತಾರೆ. ಅದಕ್ಕೆ ರಾಚಯ್ಯನವರು "ನಾನು ಸೋತಿದ್ದರೆ ನೀವುಗಳು ಹೇಗೆ ಅವುಗಳನ್ನು ಹಿಂದಿರುಗಿಸುತ್ತಿರಲಿಲ್ಲವೋ ಹಾಗೆಯೇ ನಾನು ನಿಮಗೆ ಹಿಂದಿರುಗಿಸುವುದು ಸಾಧ್ಯವಿಲ್ಲ" ಎಂದು ಹೇಳಿ ಬಿಡುತ್ತಾರೆ. ಈ ಮಾತಿನಿಂದ ಕೋಪಬಂದು ರಾಚಪ್ಪಾಜಿ ಗೋಲಿ ಗೊಜ್ಜುಗಳನ್ನು ಅಪಹರಿಸಿದ್ದಾನೆ ಎಂದು ಸುಳ್ಳು ದೂರನ್ನು ತಮ್ಮ ಹೆತ್ತಯ್ಯ ಮುತ್ತಯ್ಯರಿಗೆ ಹೇಳುತ್ತಾರೆ. ಆಗ ಆ ಗಾರುಡಿಗರು ಕೇಳಿರೋ! ಕೇಳಿ! ನಾವು ಮಂಡಿ ಬಂಡೆ ಒಳಗೆ ಏಳು ಸುತ್ತಿನ ಕೋಟೆ ಕಟ್ಟಿಸಿದ್ದೇವೆ ಯಾವನೋ ಪರದೇಶಿ ಹುಡುಗ ಬಂದು ನಮ್ಮ ಮಕ್ಕಳ ಆಟವನ್ನೆ ಕೆಡಿಸಿದ್ದಾನೆ ಎಂದು ಕೋಪಗೊಂಡು

ರಣಮೋಡಿ ಹಾಕಿ ಇವನ
ರಂಗದಲ್ಲಿ ಕೊಲ್ಲಬೇಕು!

ಎಂದು ಊರ ಅಂಕಣಕ್ಕೆ ಬರುತ್ತಾರೆ. ರಾಚಯ್ಯನನ್ನು ಪರದೇಶಿ ಎಂದು ದೂಷಿಸಿ ಸಿತಾಳೆ ಚಪ್ಪರ ಹಾಕಿ ಅದರ ಮುಂದೆ ಆಳುದ್ದದ ಬಾವಿ ತೆಗೆಸಿ ಬಾವಿಯನ್ನು ಕಳ್ಳಿ ಮತ್ತು ಎಕ್ಕದ ಹಾಲಿನಿಂದ ತುಂಬಿ ನಡು ಚಪ್ಪರದಲ್ಲಿ ಕೋಣವನ್ನು ಕಡಿದು, ಕೋಣನ ತಲೆಯ ಮೇಲೆ ರಾಗದೀವಿಗೆ ಎತ್ತಿ ರಾಗದೀವಿಗೆಯ ಒಳಗೆ ಬಂಗಾರವನ್ನು ಇಡುತ್ತಾರೆ.

ಅಕ್ಕಿಯನ್ನು ಕೆಲವರು, ವಿಭೂತಿಯನ್ನು ಕೆಲವರು ಮಂತ್ರಿಸುತ್ತಾರೆ ಇನ್ನು ಕೆಲವರು ಅಟ್ಟ ಸ್ಥಳವನ್ನು ಮತ್ತೆ ಕೆಲವರು ಜಲ ಸ್ಥಳವನ್ನು ನಡೆಸಿ "ಈ ಮೋಡಿಯನ್ನು ಎತ್ತಿಕೋ ಪರದೇಶಿ! ನೀನು ಹಾಗೆ ಈ ಮೋಡಿಯನ್ನು ಎತ್ತಿದುದೆ ಆದರೆ ನಮ್ಮ ಎಲ್ಲಾ ಬಿರುದು ಭಿಕ್ಷೆಗಳನ್ನೆಲ್ಲ ನಿನಗೆ ಕೊಟ್ಟು ಬಿಡ್ತುತ್ತೇವೆ" ಎಂದು ಸಾರುತ್ತಾರೆ. ಆಗ ರಾಚಯ್ಯ ಸ್ವಾಮಿ "ನಾವು ಮೋಡಿಯನ್ನು ಎತ್ತದ ಹೋದರೆ ನಮ್ಮ ಬಿರುದು ಭಿಕ್ಷೆಗಳನ್ನು ನಿಮಗೆ ಕೊಟ್ಟು ಬಿಡುತ್ತೇವೆ" ಎಂದು ಪಂದ್ಯಕ್ಕೆ ನಿಂತು ಕಾಲಿಗೆ ಹುರಿಗೆಜ್ಜೆ ಕಟ್ಟಿಸಿಕೊಂಡು ಕುಣಿದು ಪ್ರಭುದೇವಾದಿ ದೇವತೆಗಳನ್ನು ಸ್ಮರಿಸಿ

ಕಾಲಿಗೆ ಹುರಿಗೆಜ್ಜೆ ಕಟ್ಟಿ ಕುಣಿಯುತ್ತಾರೆ ರಾಚರಾಯ್ತು
ನಮ್ಮ ತಾಯಿ ಸುರಮ್ಮನವರೆ ನಿಮ್ಮ ಪಾದವೆ ಗತಿ
ನಮ್ಮ ತಂದೆ ಕೂಡಲಸಂಗಮದೇವರೆ ನಿಮ್ಮ ಪಾದವೆ ಗತಿ
ನಮ್ಮ ಸಾಕಿದರೆಲ್ಲಾ ನೀಲಮ್ಮನವರೆ ಬಸವಣ್ಣನವರೇ ನಿಮ್ಮ ಪಾದವೇಗತಿ
ನನ್ನ ಮರ್ತ್ಯ ಲೋಕಕ್ಕೆಕರ್ಕೊಂಡು ಬಂದ್ರ ಪ್ರಭುದೇವ
ನಿಮ್ಮ ಪಾದವೇ ಗತಿ

ಆಗ ಗಾರುಡಿಗರು ಮತ್ತೆ ತಮ್ಮ ಮನೆ ದೇವತೆ ಮಲೆಯಾಳದ ಸತ್ಯದೇವಿಯ ದೇವಾಲಯಕ್ಕೆ ಹೋಗಿ ಆ ದೇವಿಯ ಉಪಾಸನೆ ಮಾಡಿದರು. ಸುಪ್ರೀತಳಾದ ದೇವಿ ರಾಚಪ್ಪಾಜಿಯನ್ನು ಬಾಳೆಹಣ್ಣು ನುಂಗುವಂತೆ ನುಂಗುತ್ತೇನೆ ಎಂದು, ತಮ್ಮ ತಮ್ಮೊಡನೆ ಕುಣಿಯುತ್ತ ಬಂದಳು ಗಾರುಡಿಗರೆಲ್ಲಾ ರಾಚಪ್ಪಜಿಯವರ ಕಥೆ ಮುಗಿಯಿತು ಎಂದುಕೊಂಡರು.

ರಾಚಪ್ಪಾಜಿಯವರು ಒಂದೇ ಕ್ಷಣದಲ್ಲಿ ಆ ಮಂಡಲಗಳನ್ನೆಲ್ಲಾ ಎಡ ಪಾದದಲ್ಲಿ ಜೋಡಿಸಿ ಒದ್ದು ಮೋಡಿಯನ್ನು ಗೆದ್ದರು ಅಲ್ಲದೆ.....

ಏನಲೆ ಸತ್ಯದೇವಿ ನಾನ್ಯಾರು ಅಂತ ತಿಳುಕೊಂಡೆ
ಹಾಗೆಂದು ಆ ಮಂಡ್ಯ – ಇವು
ದುರುದುರನೆ ನೋಡದ್ರಂತೆ

ರಾಚಪ್ಪಾಜಿಯವರ ಕೆಂಡಗಣ್ಣಿನ ದೃಷ್ಟಿ ತಾಕಿದ್ದೆ ತಡ ಮಲೆಯಾಳದಮ್ಮ

ಗಡಗಡನೆ ನಡುಗಿಬಿಟ್ಟ
ಹಂಬಳವ ಹುಯ್ದೊಕೊಂಡಳಂತೆ

ಅಷ್ಟೇ ಅಲ್ಲ ಥರಥರನೇ ನಡುಗುತ್ತ ಅಲ್ಲಿ ಕ್ಷಣ ಕಾಲವೂ ನಿಲ್ಲಲಾರದೆ ಬಿದ್ದಾಂಬೀಳ ಓಟ ಕಿತ್ತಳಂತೆ ಇದನ್ನು ಕಂಡ ಗಾರುಡಿಗರೆಲ್ಲಾ ಓಡೋಡಿ ಹೋಗಿ ಅವಳನ್ನು ಅಡ್ಡಗಟ್ಟಿ "ಯಾಕೇ ಹೀಗೆ ಓಡೋಗ್ತ ಇದ್ದಿ ತಾಯಿ?' ಎಂದು ಕೇಳಿದರು ಅದಕ್ಕವಳು ಸೊಲ್ಲು ಹುಯ್ಯಲಾರದೆ ಎದುರುತ್ತ ಒಡುತ್ತಾ ಗಡಗಡ ನಡುಗುತ್ತ

ಅಯ್ಯೊ ನನ ಕಂದಗಳಾ
ನನ್ನಂಥ ಮಾರೀರ್ಗೆಲ್ಲಾ –ಅವ್ರು
ಯಜಮಾನ್ರು ಅಂದಳಂತೆ!
ನನ್ನ ಪೂರ್ವ ಪುಣ್ಯದಿಂದ ಅವರ
ಕೈಗೆ ಸಿಕ್ಕ ಗೆದ್ದು ಕೊಂಡೆ
ಆ ರೇಚಣ್ಣ ಬಳಿಗೆ ಮಾತ್ರ – ನಾ
ಬರೋದಿಲ್ಲ ಅಂದಳಂತೆ
ನನ್ನ ತೊಡೆ ನಡುಗುತಾವೆ – ನಾ
ಏಳಲಾರೆ ಅಂದಳಂತೆ"

ಸತ್ಯದೇವಿಯ ಸ್ಥಿತಿಯನ್ನು ನೋಡಿದ ಗಾರುಡಿಗರು ಅವಳನ್ನು ಅಡ್ಡಗಟ್ಟಿ ಹೊತ್ತುಕೊಂಡು ಹೊರಟರಂತೆ ಆಗ ರಾಚಪ್ಪಾಜಿಯವರು ನಿಮಗೆ ನಿಮ್ಮ ತಾಳ ತಮಟೆ ಗಂಟು ಮೂಟೆಗಳೆಲ್ಲಾ ಬೇಕಾದರೆ ಆ ನಿಮ್ಮ ದೇವ್ರು ಎಲ್ಲಿ ತೋರಿಸಿ ಎಂದರು ಆ ಮಾತು ಕೇಳಿದ ಕೂಡಲೇ ಸತ್ಯದೇವಿ ಅಡ್ಡ ಒಳಗೆ ಉಚ್ಚೆ ಹೊಯ್ದುಕೊಂಡಳು ಅಡ್ಡೆ ಒಳಗಿನಿಂದ ಸುರಿತಾ ಇರೋದು ಏನ್ರಪ್ಪಾ? ಎಂದು ರಾಚಪ್ಪಾಜಿಯವರು ಕೇಳಿದ್ದಕ್ಕೆ ನೀರು ಚೆಲ್ಲಿ ಹೋಯಿತು ಎಂದು ಹೇಳಿದರು ಗಾರುಡಿಗರು ಆಗ ರಾಚಪ್ಪಾಜಿ.

ನೀವು ಆಡಿದ ಮಾತಿನಂತೆ ನಡೆದುಕೊಳ್ಳಿ ಇಲ್ಲದಿದ್ದಲ್ಲಿ ಈ ನಾನೊಂದು ಮೋಡಿಯ ಹಾಕುವೆ ನೀವು ಏಳು ನೂರು ಜನರ ಎತ್ತರ ಎಂದು ಹೇಳಿ ತಮ್ಮ ಮುತ್ತಿನ ಕಮಂಡಲವನ್ನು ಜೋಳಿಗೆಯಲ್ಲಿ ಮಂತ್ರಿಸಿ ಇಟ್ಟು ಚಿತ್ರದಲ್ಲಿ ನೆಲದ ಮೇಲೆ

ಮೂರು ಮಂಡಲ ಬರೆದು ಅದರಲ್ಲಿ ಇಡುತ್ತಾರೆ. ಆ ಓಳು ನೂರು ಗಾರುಡಿಗರು ಮಾಡಿ ತೆಗೆಯುವ ಎಲ್ಲ ಮಂತ್ರ ಮಾಟಗಳನ್ನು ಮಾಡಿ ಕಮಂಡಲ ಎತ್ತಲು ಹೋಗಿ ರಕ್ಕುತ ಕಾರುತ್ತ. . . . .

ನೂರೊಂದಕ್ಲು ಗಾಡುಗೆಲ್ಲಾ
ವಾಕುವಾಗ ಹೋದಂತೆ

ಆಗ ಗಾರುಡಿಗರು ಹೆಂಡಿರು ಮಕ್ಕಳೆಲ್ಲಾ ಬಂದು ಸತ್ತು ಬಿದ್ದಿರುವವರ ಮುಂದೆ ಅಳುತ್ತಾ ನಿಲ್ಲುತ್ತಾರೆ. ಇವರ ದುಃಖ ಮತ್ತು ಅಳು ಕೋಡು ಬಂಡೆಗಳ ಮೇಲೆ ಮಲಗಿ ನಿದ್ರಿಸುತ್ತಾ ಇರುವ ಪ್ರಭುದೇವರಿಗೆ ತಟ್ಟಿ ಅವರು ಬೆಟ್ಟದಂತಾಗಿ ಮೇಲೆದ್ದು ವಿಜಯನಗರದ ಊರ ಅಂಕಣಕ್ಕೆ ಓಡೋಡಿ ಬರುತ್ತಾರೆ.

ಸ್ವಾಮಿ ರಾಚಪ್ಪಾಜಿಯವರ ಕಣ್ಣುಗಳಲ್ಲಿ ಕಿಡಿಕಾರುತ್ತ ಗಾರುಡಿಗರ ಬಿರುದು ಭಿಕ್ಷೆಗಳನ್ನೆಲ್ಲಾ ಕಿತ್ತುಕೊಂಡು ಎರಡು ಮೊಗ್ಗಲಿಗೂ ನೇತು ಹಾಕಿಕೊಂಡು ಕುಣಿಯುತ್ತಿದ್ದಾರೆ. ಆಗ ಪ್ರಭುದೇವರು 'ಗಾರುಡಿಗರು ರಾಚಪ್ಪನವರ ಮಹಿಮೆ ತಿಳಿಯದೆ ಅನ್ಯಾಯವಾಗಿ ಪ್ರಾಣ ಕೊಟ್ಟರಲ್ಲಾ' ಎಂದು ನೊಂದುಕೊಂಡು ರಾಚಪ್ಪನವರನ್ನು ಮೂರು ವಾಗ್ದಾನ ಕೊಡಿರೆಂದು ಪಡೆದುಕೊಳ್ಳುತ್ತಾರೆ. ಗಾರುಡಿಗರ ಹೆಂಡಿರೆಲ್ಲಾ ತಮ್ಮ ಮಕ್ಕಳೊಡನೆ ಸೇರಿ.

'ಪರಮ ಪರಂಜ್ಯೋತಿ ದಯೆತೋರಿ, ನೀವು ಗಾರುಡಿಗರ ಗಾರುಡಿಗರು ಮಹಾ ವಿದ್ಯಾಶೀಲರು, ಸ್ವಾಮಿ ನಾವು ಏನು ಅರಿಯದ ಜನರು ನಿಮ್ಮ ಪಾದಗಳಿಗೆ ಎರಗುತ್ತಿದ್ದೇವೆ. ದಯಮಾಡಿ ನಮ್ಮನ್ನು ಆಶೀರ್ವದಿಸಿ ನಮ್ಮ ಗಂಡಂದಿರು ಹಾಗೂ ಮಕ್ಕಳನ್ನು ನಮಗೆ ಉಳಿಸಿಕೊಡಿ ನೀವಲ್ಲದೆ ಅನ್ಯ ದೇವರಾರು ನಮ್ಮನ್ನು ಕಾಪಾಡಲಾರರು.'

ಎಂದೆಲ್ಲಾ ಪ್ರಾರ್ಥಿಸುತ್ತಾರೆ. ಆಗ ಪರಮ ಪರಂಜ್ಯೋತಿಯವರು ಧೂಳಿತವನ್ನು, ಮಾಯದ ಕಪ್ಪನ್ನು ತೆಗೆದು ಗಾರುಡಿಗರ ಮೇಲೆ ಚಿಮುಕಿಸುತ್ತಾರೆ. ಆಗ ಅವರೆಲ್ಲಾ ತಾವೇ ನಿದ್ದೆಯಿಂದ ಎದ್ದವರಂತೆ ಮೇಲೆದ್ದರು. ನಂತರ ಸ್ವಾಮಿಗೆ ನಮಸ್ಕರಿಸಿ 'ಪ್ರಭು ನಾವು ಮಹಾ ಮೋಡಿಗಾರರು ನಮ್ಮ ವಿದ್ಯೆಯಲ್ಲಿ ಮಹಾ ನಿಪುಣರು ಆದರೆ ನಿಮ್ಮ ವಿದ್ಯೆ ಮುಂದೆ ನಮ್ಮದು ವಿದ್ಯೆಯೇ ಅಲ್ಲ ನಮ್ಮ ಅಪರಾಧಗಳನ್ನು ಕ್ಷಮಿಸಿ ಕಾಪಾಡಿದಿರಿ' ಎಂದು ಹರ್ಷ ತುಂಬಿದವರಾಗುತ್ತಾರೆ.

ಆಗ ಪ್ರಭುದೇವರು ರಾಚಪ್ಪನವರ ಕಡೆನೋಡಿ 'ಮಗು ರಾಚಪ್ಪಯ್ಯನವರೆ ಈ ಗಾರುಡಿಗರ ಬಿರುದು, ನಿಶಾನಿ, ಕೊಂಬಿನ ಕಹಳೆ ನಮಗೆ ಯಾವ ಕೆಲಸಕ್ಕೂ ಬಾರದು

ಮುಂದೆ ನಮ್ಮ ನಿಜ ಯೋಗದಿಂದ ಬೇಕಾದಷ್ಟು ಬಿರುದು ಬಾವಲಿಗಳು ಬರುತ್ತವೆ. ಆದ್ದರಿಂದ ಅವುಗಳನ್ನೆಲ್ಲಾ ಅವರಿಗೆ ಹಿಂದಿರುಗಿಸಿ ಮುಂದೆ ನಡೆಯಿರಿ' ಎಂದರು ತಮ್ಮ ಬಿರುದು ಭಿಕ್ಷೆಗಳನ್ನು ಹಿಂದಕ್ಕೆ ಪಡೆದ ಗಾರುಡಿಗರು ಪ್ರಭುದೇವರ ಒಕ್ಕಲುತನವನ್ನು ಬೇಡಿ ಪಡೆದುಕೊಳ್ಳುತ್ತಾರೆ. ಮಾಯದ ಬೂದಿ ಮತ್ತು ಮಲೆಯಾಳದ ಕಪ್ಪನ್ನು ಧರೆಗೆ ದೊಡ್ಡವರು ಹಿಂತಿರುಗಿಸಲಿಲ್ಲ ಕಾರಣ ಅವರು ಧೂಳಿತ ಮತ್ತು ಕಪ್ಪನ್ನು ನಿಮಗೆ ಕೊಟ್ಟರೆ ಹುಲು ಜೀವಿಗಳಾದ ನೀವು ಅದರಿಂದ ಜನರಿಗೆ ಕಿರುಕುಳ ಕೊಡುತ್ತೀರಿ ಆದ್ದರಿಂದ ಅದನ್ನು ನಿಮಗೆ ಕೊಡುವುದಿಲ್ಲ ನಾವು ಮುಂದೆ ಹೊರುತ್ತೇವೆ ನಿಮಗೆ ಸಕಲ ಸನ್ಮಂಗಳವು ಉಂಟಾಗಲಿ ಎಂದು ಸ್ವಾಮಿ ತಮ್ಮ ನಾಲ್ವರು ಶಿಷ್ಯರೊಡನೆ ಪ್ರಯಾಣ ಬೆಳೆಸಿದರು ಅಲ್ಲಿಂದ ಮುಂದೆ ತುರುಕಾರಣ್ಯಕ್ಕೆ ಬಂದರು.

ರಾಚಪ್ಪಾಜಿಯವರು ಭಿಕ್ಷೆಗಾಗಿ ಮುಸಲ್ಮಾನರ ಬೀದಿಗೆ ಹೋದಾಗ ಆ ತುರುಕರೆಲ್ಲಾ ಈ ಕಾವಿ ಜೋಳಿಗೆಯ ಹುಡುಗನನ್ನು ಕಂಡು ಅಪಹಾಸ್ಯ ಮಾಡಿದ್ದಲ್ಲದೆ ಭಿಕ್ಷೆಗಾಗಿ ನೀಡಿದೆ ಎರಡು ಕೈಗಳ ಕತ್ತರಿಸಿ ಹಾಕಿದರು. ಇದರಿಂದ ಸ್ವಲ್ಪವೂ ನೋಯದ ರಾಚಪ್ಪಾಜಿಯವರು ಮುಂದಿನ ಕೇರಿಗೆ ಹೋಗಿ ಭಿಕ್ಷೆ ಸಾರುತ್ತಿದ್ದರು. ಅಲ್ಲಿಗೂ ಬೆನ್ನಟ್ಟಿ ಬಂದ ತುರುಕರು ರಾಚಪ್ಪಾಜಿಯವರನ್ನು ನೋಡಿ ಬೆಪ್ಪಾಗಿ ನಿಂತರು. ಏಕೆಂದರೆ ಕತ್ತರಿಸಿದ ಎರಡು ಹಸ್ತಗಳು ತುರುಕರ ಬಳಿಯೇ ಇದ್ದವು. ಆದರೂ ರಾಚಪ್ಪಾಜಿಯವರ ಕೈಗಳು ಅವರ ಕೈಗಳಲ್ಲಿ ಕತ್ತರಿಸಿಯೇ ಇಲ್ಲ ಎನ್ನುವಂತೆಯೇ ಇದ್ದವು ಇದನ್ನು ಕಂಡು ದಿಗ್ಮೂಢರಾದ ತುರುಕರು.

'ಸ್ವಾಮಿ ಆಚೆ ಬೀದೀಲಿ ನಿಮ್ಮ ಹಸ್ತಗಳನ್ನು ಕತ್ತರಿಸಿ ಹಾಕಿದೆವು. ಅವು ನಮ್ಮಲ್ಲೇ ಇವೆ. ಆದರೂ ನಿಮ್ಮ ಹಸ್ತಗಳು ಮೊದಲಿದ್ದಂತೆಯೇ ಇವೆಯಲ್ಲಾ ನೀವೆಂತಹ ಮಹಾನುಭಾವರಿರಬಹುದು' ಎಂದು ಹೇಳಿ ಅವರ ಪಾದಗಳಿಗೆ ಹಾಸಿ ಹಾಸಿ ಬಿದ್ದರು ಅಷ್ಟು ಹೊತ್ತಿಗೆ ಧರೆಗೆ ದೊಡ್ಡವರು ಅಲ್ಲಿಗೆ ಬಂದು

'ನೀವು ದೇವರಿಲ್ಲ ಎನ್ನುವ ಜನ ನೀವು ದೇವರು ಕಾಣದ ಜನ, ನಿಮಗೆ ನಾವು ದೇವರಾಗಬೇಕೆಂದು ನಿಮ್ಮ ಊರಿಗೆ ಬಂದೆವು ನಮ್ಮ ರಾಚಪ್ಪಾಜಿಯವರ ಹಸ್ತಗಳನ್ನು ನೀವು ಪ್ರೀತಿಪಟ್ಟು ಕತ್ತರಿಸಿಕೊಂಡಿದ್ದೀರಿ. ನಮಗೆ ಆನಂದವಾಯಿತಪ್ಪ ನೀವು ವರ್ಷಕ್ಕೊಂದು ಸಲ ನಮ್ಮ ಈ ಸ್ಥಳಗಳನ್ನು ಪೂಜಿಸಿಕೊಂಡು

ಬಾಬಯ್ಯನ ಹಬ್ಬ ಎಂದು – ನೀವು

ಮಾಡಿಕೊಳ್ಳಿ ಹೋಗಿರಪ್ಪ!

ಎಂದು ತಾಕಿತು ಮಾಡಿ 'ತುರುಕಾರರಣ್ಯದ ಗುರು' ಎಂದು ಹೆಸರನ್ನು ಪಡೆದುಕೊಂಡು ಅಲ್ಲಿಂದ ಮುಂದೆ ಕಾಗಿನೆಲೆಗೆ ಬಂದರು. ಪರಂಜ್ಯೋತಿಯವರು ರಾಚಪ್ಪಯ್ಯನವರಿಗೆ ಈಗಿಂದೀಗಲೇ ವಿವಾಹ ಮಾಡಿಬಿಡಬೇಕು ಎಂದು ತೀರ್ಮಾನಕ್ಕೆ ಬಂದು ಶುಭ ಮೂಹೂರ್ತವನ್ನು ಗುರುತಿಸುತ್ತಾರೆ.

ಕಾಗಿನೆಲೆಯ ರಾಜ ಬಸವಲಿಂಗಯ್ಯನವರಿಗೆ ಕಲ್ಯಾಣಮ್ಮನೆಂಬ ಯೋಗ್ಯ ಮಡದಿ ಇವರಿಗೆ ಗಂಡು ಸಂತಾನವೇ ಇಲ್ಲದೆ ಒಂದೇ ಒಂದು ಹೆಣ್ಣು ಸಂತಾನ ಮಾತ್ರ. ಇವರ ಅರಮನೆಯ ಬಾಗಿಲಿಗೆ ನಮ್ಮ ಸ್ವಾಮಿ ಭಿಕ್ಷೆಗಾಗಿ ಬಂದು ತಮ್ಮ ಡಂಗೂರವನ್ನು ಬಹಳ ವೇಗದಲ್ಲಿ ಬಾರಿಸುತ್ತ "ಭಿಕ್ಷೆ ನೀಡಿ ತಾಯಿ" ಎಂದು ಬೇಡುತ್ತಾರೆ. ಬಾಗಿಲಿಗೆ ಯತಿ ಬಂದಿರುವುದನ್ನು ಕಂಡ ಕಲ್ಯಾಣಮ್ಮ ಮುತ್ತುರತ್ನಗಳ ದಾನವನ್ನು ನೀಡುತ್ತಾಳೆ, ಸ್ವಾಮಿ ಅದನ್ನು ತಿರಸ್ಕರಿಸುತ್ತಾರೆ. ಆಗ ಆಕೆ "ನಿಮಗೆ ಬೇರೆ ಯಾವ ಭಿಕ್ಷೆ ಬೇಕುಸ್ವಾಮಿ?" ಎಂದು ಕೇಳುತ್ತಾಳೆ ಸ್ವಾಮಿ ಮತ್ತೆ ಡಂಗುರ ಬಡಿದು "ಮಗಳೆ ನಿನ್ನ ಕರುಳಿನ ಒಂದೇ ಒಂದು ಕಂದಮ್ಮನನ್ನು ನೀವು ಗಂಡ ಹೆಂಡಂದಿರು ಪ್ರೀತಿಯಿಂದ ಒಪ್ಪಿ ನನ್ನ ನಾಲ್ಕು ಪಾದದ ಜೋಳಿಗೆಗೆ ಹಾಕಿ ಎನ್ನುತ್ತಾರೆ." ಇದರಿಂದ ಖಿನ್ನಳಾದ ಕಲ್ಯಾಣಮ್ಮ ಗಂಡನ ಬಳಿಗೆ ಬಂದ ಯೋಗಿ ಹೇಳಿದ ವಿಚಾರ ತಿಳಿಸುತ್ತಾಳೆ. ಬಸವಲಿಂಗಯ್ಯನಿಗೆ ಕೋಪ ಅತಿಯಾಗಿ ಬಂದು ಆ ಯೋಗಿ ನಾವು ಗಂಡಿಗಿಂತಲೂ ಹೆಚ್ಚಿನ ಪ್ರೀತಿಯಲ್ಲಿ ಸಾಕಿರುವ ಮಗುವನ್ನು ಕೇಳಿದನೆ? ಅವನ ಕತ್ತಿನ ಮೇಲೆ ಗುದ್ದಿ ಅವನನ್ನು ಆಚೆಗೆ ನೂಕಿ ಬಿಡಿ ಎಂದು ಬಿಡುತ್ತಾರೆ. ಆ ಕೂಡಲೆ ಸ್ವಾಮಿ ಲಘು ಬಗೆಯಿಂದ ತನ್ನ ಜೋಳಿಗೆಯ ಕಪ್ಪನ್ನು ತೆಗೆದು ಆ ಹೆಣ್ಣು ಮಗುವಿನ ಮೈಮೇಲೆ ಚೆಲ್ಲಿ ಮರೆಯಾಗಿ ಬಿಡುತ್ತಾರೆ.

ಮಗುವಿಗೆ ಯಮ ಚಳಿಜ್ವರ ಬಂದು ಕ್ಷಣದಲ್ಲೆ ಸತ್ತು ಹೋಗುತ್ತದೆ. ಆಗ ಮಗುವನ್ನು ತೊಳೆದು ಸಿಂಗಾರ ಮಾಡಿ ಪಲ್ಲಕ್ಕಿಯ ಮೇಲೆ ಮಲಗಿಸಿಕೊಂಡು ಮಸಣಕ್ಕೆ ತಂದು ವಿಧಿವತ್ತಾಗಿ ಹೂತು ಅರಮನೆಗೆ ಹಿಂದಿರುಗಿ ದುಃಖ ತಪ್ತರಾಗಿ ರೋಧಿಸಿತೊಡಗುತ್ತಾರೆ. ಇದೆ ಸಮಯ ಕಾದಿದ್ದ ಪರಂಜ್ಯೋತಿ ಮಸಣಕ್ಕೆ ಬಂದು ಕಪ್ಪು ಧೂಳಿತವನ್ನು ಗೋರಿಯ ಮೇಲೆ ಪ್ರೋಕ್ಷಣೆ ಮಾಡಿ "ಏಳು ಮಗಳೆ ನಿನಗೆ ಜಯವಾಗುತ್ತದೆ" ಎಂದು ಹೇಳುತ್ತಿರುವಂತೆ ಮಗು ನಗುನಗುತ್ತ ಸಮಾಧಿಯನ್ನು ಒಡೆದು ಮೂಡಿ ನಿಲ್ಲುತ್ತಾಳೆ. ಆ ಮಗಳಿಗೆ ಹರಿವ ನೀರಿನಲ್ಲಿ ಸ್ನಾನ ಮಾಡಿಸಿ ಬಾವಿಯ ದೇವಾಂಗ ಉಡಿಸಿ ವಿಭೂತಿ ಧರಿಸಿ ಕಪ್ಪಿನ ಬಟ್ಟನ್ನು ಇಟ್ಟು ನಾಗ ಬೆತ್ತವನ್ನು ಕೊಟ್ಟು ಅವರ ತಂದೆ-ತಾಯಿಗಳ ಸನ್ನಿಧಿಗೆ ಕರೆತರುತ್ತಾರೆ. ತಂದೆ ತಾಯಿಗಳ ಮಗುವನ್ನು ತಬ್ಬಿ ಮುದ್ದಾಡುತ್ತಾರೆ.

ಸ್ವಾಮಿ ಸಿಡಿಲಾಗಿ ಎರಗಿ ಹೇಳುತ್ತಾರೆ "ಈ ಮಗಳು ನಿಮ್ಮಂದೇ ಆದರೆ ನೀವೆ ಕರೆದುಕೊಳ್ಳಿ" ಆದರೆ ಆ ಮಗಳು ತನ್ನ ವಸ್ತು ಹೋದಾಗಲೇ ತನಗೂ ಪಾಲಕರಿಗೂ ಇರುವ ಸಂಬಂಧ ತಪ್ಪಿತೆಂದು ಹೇಳಿ "ನಾನು ನನ್ನ ಪರಂಜ್ಯೋತಿಯ ಪಾದ ಸನ್ನಿಧಿಯಲ್ಲಿ ನೆಲಸುತ್ತೇನೆ." ಎನ್ನುತ್ತಾಳೆ. ಆಗ ಸ್ವಾಮಿ ಆ ದಂಪತಿಗಳನ್ನು ಕುರಿತು "ನೀವು ಇನ್ನು ದುಃಖ ಪಡಬೇಡಿ ಈ ಮಗಳನ್ನು ನಾವು ದೇವತೆಯಾಗಿ ಪರಿವರ್ತಿಸಿದ್ದೇವೆ. ಆಕೆಯ ಪೂಜಾದಿಗಳನ್ನು ನೀವೆ ಮಾಡಿಕೊಂಡು ಬರುವ ಹುಂಬಳಿಯನ್ನು ಉಪಯೋಗಿಸಿಕೊಂಡು ಜೀವಿಸುತ್ತ ಬನ್ನಿ, ಈ ಮಗುವಿನ ಕ್ಷೇತ್ರ ಮುಂದೆ ಮಹಾ ಮಹಿಮಾನ್ವಿತ ಕ್ಷೇತ್ರವಾಗಿ ನಿಮ್ಮ ಬದುಕನ್ನೇ ಭವ್ಯವಾಗಿ ಮಾಡುವಳು" ಎನ್ನುತ್ತಾರೆ. ಈ ಮಾತನ್ನು ಕೇಳಿ ಸಂತೋಷ ಚಿತ್ತರಾದ ಬಸವಲಿಂಗಯ್ಯ ಮತ್ತು ಕಲ್ಯಾಣಮ್ಮ, ಸ್ವಾಮಿಗೂ ಆತನ ಜೊತೆಯ ಶರಣರಿಗೂ, ಬಾವಿ ಧರಿಸಿ ನಿಂತಿರುವ ಮಗಳಿಗೂ ನಮಸ್ಕಾರ ಮಾಡುತ್ತಾರೆ.

**ಕಪ್ಪಡಿ ಜಾತ್ರೆ ಹಿನ್ನೆಲೆ**

ಜಾತ್ರೆಗಳ ಆಚರಣೆಗಳಲ್ಲಿ ಪ್ರತಿಯೊಂದು ಜಾತ್ರೆಯೂ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿರುತ್ತದೆ. ಮತ್ತು ಅಪೂರ್ವ ಕಲ್ಪನೆಯೂ ಇದಕ್ಕಿರುತ್ತದೆ. ಇಂತಹ ವಿಶಿಷ್ಟತೆಯನ್ನು ಪಡೆದಿರುವುದರಲ್ಲಿ 'ಕಪ್ಪಡಿ ಜಾತ್ರೆ' ಮುಖ್ಯವಾದದ್ದು. ಕಪ್ಪಡಿ ಕ್ಷೇತ್ರದ ಜಾತ್ರೆಯು ಪ್ರತಿವರ್ಷ ಶಿವರಾತ್ರಿಯಿಂದ ಪ್ರಾರಂಭವಾಗಿ ಯುಗಾದಿಯವರೆಗೂ ನಡೆಯುತ್ತದೆ. ಹಾಗೆ ನೋಡಿದರೆ ನಮ್ಮ ನಾಡಿನ ಹಲವು ಜಾತ್ರೆಗಳಲ್ಲಿ ಇಷ್ಟು ದೀರ್ಘಾವಧಿಯವರೆಗೆ ನಡೆಯುವ ಜಾತ್ರೆಗಳು ಅಪರೂಪವೆಂದೇ ಹೇಳಬಹುದು. ಈ ಜತ್ರೆಯನ್ನು ಮಂಟೇಸ್ವಾಮಿ ಸಂಪ್ರದಾಯದ ಬೊಪ್ಪೇಗೌಡನ ಪುರ ಮಠದ ಅರಸು ಸಂತತಿಯವರು ಒಂದು ವರ್ಷ ನಡೆಸಿದರೆ ಅದರ ಮುಂದಿನ ವರ್ಷ ಮಳವಳ್ಳಿ ಮಠದ ಅರಸು ಮನೆತನದವರು ನಡೆಸುತ್ತಾರೆ. ಹೀಗೆ ಅನುಕ್ರಮವಾಗಿ ಒಂದೊಂದು ವರ್ಷ ಒಬ್ಬೊಬ್ಬರು ನಡೆಸಿ ಕೊಂಡು ಬರುತ್ತಾರೆ. ಈ ಅನುಕ್ರಮದ ಪೂಜಾ ಪರಂಪರೆಗೆ ಒಂದು ಸಾಂಪ್ರದಾಯಿಕ ಐತಿಹ್ಯವಿದೆ. ಅವನ್ನು ಮುಂದೆ ಸಂಗ್ರಹಿಸಿ ಬರೆದಿದೆ.

ಮಂಟೇಸ್ವಾಮಿಗಳು ಗುಂಬಳಾಪುರದ ಮಾರ್ಗವಾಗಿ ಸಕ್ಕರೆ ಪಟ್ಟಣಕ್ಕೆ ಬರುತ್ತಾರೆ. ಅಲ್ಲಿ ಇಬ್ಬರು ರಾಜರು ಏಳು ಜನ ಜಂಗಮರಿಗೆ ಪ್ರತಿ ದಿನವೂ ಆರೋಹಣೆ ನಡೆಸಿ ನಂತರ ತಾವು ಊಟ ಮಾಡುವ ಪದ್ಧತಿಯಲ್ಲಿರುತ್ತಾರೆ. ಆಗ ಮಂಟೇಸ್ವಾಮಿಗಳೂ ಏಳು ಜನ ಜಂಗಮರು ಊಟಕ್ಕೆ ಕುಳಿತ ಸಮಯಕ್ಕೆ ಸರಿಯಾಗಿ

ಅರಮನೆಯ ಬಾಗಿಲಿಗೆ ಬಂದು ಭಿಕ್ಷಾ ಭೋಜನಕ್ಕಾಗಿ ನಾವು ಬಂದಿದ್ದೇವೆ. ನಮ್ಮ ಲಾಂಛನವನ್ನು ಕಂಡ ಮೇಲೆ ನೀವು ನಮ್ಮನ್ನು ಬಿಟ್ಟು ಊಟ ಮಾಡುವಂತಿಲ್ಲ ಎನ್ನುತ್ತಾರೆ. ಆ ಕೂಡಲೇ ಇಬ್ಬರು ರಾಜರು ಮಂಟೇಸ್ವಾಮಿಗಳಿಗೆ ಹಾಗೂ ಅವರ ಪರಿವಾರಕ್ಕೆ ನಿರನ್ನು ಕೊಟ್ಟು ಜಂಗಮರ ಪಂಕ್ತಿಯಲ್ಲೇ ಎಲೆಗಳನ್ನು ಹಾಕಿ ಊಟ ಬಡಿಸಿ ತಮ್ಮ ಬಿಡದಿಗೆ ಪ್ರಯಾಣ ಮಾಡುತ್ತಾರೆ.

ಈ ಏಳು ಜಂಗಮರ ನಿಜವನ್ನು ಅರಿಯಲು ನಿರ್ಧರಿಸಿದ ನಮ್ಮ ಸ್ವಾಮಿ ಊಟ ಮಾಡುತ್ತಿರುವ ತನ್ನ ಎಂಜಲು ಕೈಯಲ್ಲೇ ಜಂಗಮರ ಲಿಂಗವನ್ನು ಮುಟ್ಟಿ ಬಿಡುತ್ತಾರೆ. ಕೋಪಗೊಂಡ ಜಂಗಮರು ರಾಜರಲ್ಲಿಗೆ ಬಂದು ನಮ್ಮ ಲಿಂಗಗಳನ್ನು ಎಂಜಲು ಕೈಯಲ್ಲಿ ಮುಟ್ಟಿದ ಈ ದೂರ್ತಾಸ್ವಾಮಿಯನ್ನು ಈ ರಾತ್ರಿ ಇಲ್ಲೇ ಇಟ್ಟುಕೊಂಡಿದ್ದು ಬೆಳಿಗ್ಗೆ ಆತನ ಜೋಳಿಗೆಗೆ ವಿಷಯ ಕಜ್ಜಾಯವನ್ನು ಹಾಕಿ ಕಳುಹಿಸಿಬಿಡಿ ಎನ್ನುತ್ತಾರೆ. ರಾಜರಿಬ್ಬರು ಜಂಗಮರು ಹೇಳಿದಂತೆ ಮಾಡಿಬಿಡುತ್ತಾರೆ.

ಕಜ್ಜಾಯಗಳನ್ನು ಹೊತ್ತುಕೊಂಡು ಬಹಳ ದೂರ ಬಂದ ಸ್ವಾಮಿ ಎಲ್ಲಾ ಭಕ್ತರನ್ನು ಸೇರಿಕೊಂಡು ತನ್ನ ಬಿರುದು ಭಿಕ್ಷೆಗಳನ್ನೆಲ್ಲಾ ಕಳೆದಿಟ್ಟು ಪಾತಾಳ ಗಂಗೆಯಲ್ಲಿ ಮಿಂದು ವಿಭೂತಿ ಧರಿಸಿ ಕಂಡುಗ ಕರ್ಪೂರ ಹಾಗೂ ಸಾಂಬ್ರಾಣಿಗಳನ್ನು ಉರಿಸಿ ಎಲ್ಲಾ ಶರಣರಿಗೂ ಉಪದೇಶ ಮಾಡಿ ತಾವು ಪೂಜೆ ಮುಗಿಸಿ ತಂದಿರುವ ಭಿಕ್ಷೆಯನ್ನು ತೆರೆದಿಟ್ಟು ನೆರೆದಿರುವವರೆಲ್ಲರಿಗೂ ಐದೈದು ವಿಷದ ಕಜ್ಜಾಯಗಳನ್ನು ಬಡಿಸುತ್ತಾರೆ. ಎಲ್ಲರೂ ಪ್ರೀತಿಯಿಂದ ಊಟ ಮಾಡಲು ತೊಡಗುತ್ತಾರೆ.

ಈ ಸಮಯಕ್ಕೆ ಸರಿಯಾಗಿ ಗುಂಬಳಾಪುರಕ್ಕೆ ವ್ಯಾಸಂಗಕ್ಕಾಗಿ ಹೋಗಿದ್ದ ಸಕ್ಕರೆ ಪಟ್ಟಣದ ಅರಸರ ಇಬ್ಬರು ಮಕ್ಕಳು ಹಿಂದಿರುಗುತ್ತ ಇದ್ದು ಹಸಿವಾಗಿದ್ದುದರಿಂದ ನಮ್ಮ ಸವಾಮಿಯ ಬಳಿಗೆ ಬಂದು ನಮಸ್ಕಾರ ಮಾಡಿ ಕಜ್ಜಾಯ ಕೊಡಿರೆಂದು ಕೇಳಿ ಪಡೆದು ತಿನ್ನುತ್ತಾ ಮಕ್ಕಳು ಸತ್ತು ಬಿದ್ದುದನ್ನು ಕಂಡ ರಾಜರಿಬ್ಬರೂ ಪರಿಪರಿಯಲ್ಲಿ ಪರಿತಪಿಸುತ್ತಾರೆ. ನಾವು ದಿನವೂ ಏಳು ಜನ ಜಂಗಮರಿಗಾದರೂ ದಾಸೋಹ ನಡೆಸಿ ಋಜು ಮಾರ್ಗದಲ್ಲಿ ಸಾಗುತ್ತಿದ್ದೇನೆ. ನಮ್ಮಂತ ಸಾತ್ವಿಕರಿಗೆ ಇಂತಹ ಶಿಕ್ಷೆ ಸರಿಯೇ ಶಿವನೇ ಎಂದು ನೊಂದುಕೊಳ್ಳುತ್ತಿರುವ ಕಾಲಕ್ಕೆ ಪ್ರಣವ ಸ್ವಾಮಿಗಳು ತಮ್ಮೆಲ್ಲರ ಊಟಾದಿಗಳನ್ನು ತೀರಿಸಿಕೊಂಡು ತಮ್ಮ ಪರಿವಾರದೊಡನೆ ಅರಮನೆಗೆ ಮತ್ತೆ ಬರುತ್ತಾರೆ.

ಯಾವ ಯತಿಯ ಆಗಮನದಿಂದಾಗಿ ತಮ್ಮ ಮಕ್ಕಳು ಸತ್ತವೋ ಅದೇ ಯತಿ ಮತ್ತೆ ಭಿಕ್ಷೆಗೆಂದು ಬಂದದ್ದನ್ನು ಕಂಡ ರಾಜರಿಬ್ಬರೂ ರೇಗಿ ತೊಲಗಿ ಆಚೆ ಏ

ಪರದೇಶಿಯೆ ನಿನ್ನಿಂದಾಗಿ ನನ್ನ ಭಾಗ್ಯವೇ ನಂದಿ ಹೋಯಿತು ಎಂದು ಕೂಗಾಡುತ್ತಾರೆ. ಆಗ ಸ್ವಾಮಿ ಇದರಲ್ಲಿ ನನ್ನದೇನೂ ತಪ್ಪಿಲ್ಲ ಅವರು ಹಸಿದು ಕಜ್ಜಾಯ ಕೇಳಿದರು. ನೀವು ನಮಗೆ ನೀಡಿದ್ದ ಕಜ್ಜಾಯವನ್ನು ಅವರಿಗೆ ನೀಡಿದೆವು. ನೀವು ಮಾಡಿದ ಪಾಪಗಳು ನಿಮ್ಮ ಮಕ್ಕಳಿಗೆ ತಟ್ಟಿಯೇ ತೀರಬೇಕಲ್ಲ ಎಂದು ಹೇಳುತ್ತಾರೆ.

ರಾಜರಿಬ್ಬರಿಗೂ ತಾವು ಮಾಡಿದ ಅಪರಾಧದ ಅರಿವಾಗಿ ಅವರು ಸ್ವಾಮಿ ಪಾದದಲ್ಲಿ ತಮ್ಮ ತಲೆಯನ್ನು ಚೆಲ್ಲಿ ನಮ್ಮನ್ನು ಮನ್ನಿಸಿ ಹರಸಿ ಎಂದು ಬೇಡುತ್ತಾರೆ. ಆಗ ಸ್ವಾಮಿ ನಿಮ್ಮ ಇಚ್ಛೆಯಂತೆ ನಿಮ್ಮ ಮಕ್ಕಳ ಪ್ರಾಣವನ್ನು ಹಿಂದಿರುಗಿಸುತ್ತೇನೆ. ಆದರೆ ಅವರನ್ನು ನಮ್ಮ ಶಿಷ್ಯ ಪರಿವಾರಕ್ಕೆ ಬಿಟ್ಟುಕೊಡಬೇಕು ಎಂದು ಹೇಳುತ್ತಾರೆ. ಆಗ ರಾಜರಿಬ್ಬರೂ ನಾವು ಈ ಮಕ್ಕಳಿಗೆ ರಾಜ್ಯಗಳನ್ನು ಕೊಡಲು ತೀರ್ಮಾನಿಸಿದ್ದೇವೆ. ನೀವು ಈ ಮಕ್ಕಳನ್ನು ಕರೆದೊಯ್ದು ಏನನ್ನು ಕೊಡುವಿರಿ ಎಂದು ಕೇಳುತ್ತಾರೆ. ಅದಕ್ಕೆ ಮಂಟೇಸ್ವಾಮಿಯವರು 'ಬಸವನ ಬೆಟ್ಟವ ಚಿನ್ನವನ್ನಾಗಿ ಮಾಡಿಕೊಡುತ್ತೇವೆ' ನಮ್ಮನ್ನು ಸ್ಮರಿಸಿ ಪೂಜೆ ಮಾಡುವ ಮರ್ತ್ಯರಿಗೆ ಬೋಧೆ ಮಾಡುವ ಗುರುಗಳನ್ನಾಗಿ ಮಾಡುತ್ತೇವೆ ಎಲ್ಲರೂ ಒಪ್ಪುತ್ತಾರೆ.

ನಿದ್ದೆಯಿಂದ ಎದ್ದವರಂತೆ ಮಕ್ಕಳು ಸ್ವಾಮಿಗಳು ಭಸ್ಮವನ್ನು ಪ್ರೇಕ್ಷಣೆ ಮಾಡಿದ ಕಾರಣದಿಂದಾಗಿ ಮೇಲೇಳುತ್ತಾರೆ. ಪರಂಜ್ಯೋತಿಯವರು ಅವರನ್ನು ಹೊಳೆಗೆ ಕರೆತಂದು ಸ್ನಾನಾಧಿಗಳನ್ನು ಮಾಡಿಸಿ ಕರಿಯ ಕಂಬಳಿಯ ಗದ್ದುಗೆಯ ಮೇಲೆ ಕೂರಿಸಿ ಕಳಸವನ್ನು ಸ್ಥಾಪನೆ ಮಾಡಿ ಅಕ್ಷತೆಯನ್ನು ಪ್ರೋಕ್ಷಿಸಿ ಕಾವಿಯನ್ನು ಧರಿಸಿ ಮುಂಗೈಗೆ ಗುರು ಕಂಕಣ ಕಟ್ಟಿ ಆರತಿಯನ್ನು ಬೆಳಗಿ ಸದ್ಬುದ್ಧಿಯನ್ನು ಮಾಡಿ ಲಿಂಗಧಾರಣೆ ಮಾಡಿಸಿ ಅವರಿಬ್ಬರಿಗೂ ಧರ್ಮಗುರುವಿನ ಪಟ್ಟ ಕಟ್ಟುತ್ತಾರೆ ಹಿರಿಯವನನ್ನು ಹಿರಿಗುರು ರಾಜಪಟ್ಟಣದ ಬಸವರಾಜೇಂದ್ರ ಸ್ವಾಮಿ ಎಂದೂ, ಕಿರಿಯವನನ್ನು ಕಿರಿಗುರು ರಾಜಪಟ್ಟದ ವೀರಭದ್ರ ಸ್ವಾಮಿ ಎಂದೂ ನಾಮಕರಣ ಮಾಡುತ್ತಾರೆ.

ಹಿರಿಗುರು ರಾಜೇಂದ್ರ ಸ್ವಾಮಿಗಳು ಮತ್ತು ರಾಜಪಟ್ಟಣದ ವಿರಭದ್ರಸ್ವಾಮಿಗಳಿಗೆ ಆಶೀರ್ವಚನ ಆದಿ ಮೂರ್ತಿ ದಯಪಾಲಿಸುತ್ತಾ.

ನಿಮಗೆ ನಾವು ಬಸವನ ಬೆಟ್ಟವನ್ನು ಬೆಳ್ಳಿಯನ್ನಾಗಿಯೂ, ಕುಂದೂರು ಬೆಟ್ಟವನ್ನು ಚಿನ್ನವನ್ನಾಗಿಯೂ ಮಾಡಿಕೊಡುವುದಾಗಿ ಅಪ್ಪಣೆ ಕೊಡಿಸಿದ್ದೆವು ಆದರೆ ಈಗ ಕಲಿ ಬಹಳ ಪ್ರಬಲವಾಗಿ ಬಿಟ್ಟಿರುವುದರಿಂದ ನಿಮಗೆ ಅಷ್ಟೆಲ್ಲಾ ಐಶ್ವರ್ಯಾದಿಗಳನ್ನು ದೊರೆತು ಬಿಟ್ಟುದೇ ಆದರೆ ಭಯ ನಿಮ್ಮನ್ನು ಊಟಮಾಡಲು ಬಿಡುವುದಿಲ್ಲ ಆದರೂ

ನಾವು ಪಾತಾಳದಲ್ಲಿ ಯೋಗ ಮುಗಿಸಿ ಬಂದಾದ ಮೇಲೆ ನಿಮ್ಮಗಳಿಗೆ ಕೊಟ್ಟಿರುವ ವಚನವನ್ನು ಪಾಲಿಸಿಕೊಡುತ್ತೇವೆ.

ಆಗ ಇದೇ ಕುಂದೂರು ಬೆಟ್ಟ ಚಿನ್ನವಾಗುತ್ತದೆ. ಬಸವನ ಬೆಟ್ಟ ಬೆಳ್ಳಿಯಾಗುತ್ತದೆ. ಆದರೂ ಈಗಲೂ ಇಲ್ಲಿನ ಆದಯವೇ ಆ ಚಿನ್ನ-ಬೆಳ್ಳಿಗಿಂತಲೂ ಮಿಗಿಲಾಗುತ್ತದೆ. ಚಿಕ್ಕಲ್ಲೂರು ಜಾತ್ರೆ ಜಗತ್ಪ್ರಸಿದ್ಧವಾಗುತ್ತದೆ. ಕಪ್ಪಡಿ ಕ್ಷೇತ್ರ ಹಿರಿದಾಗುತ್ತದೆ. ನೀಲಿ ಪಣತ ಕಪ್ಪಕಾಣಿಕೆಗಳು ನಾಲ್ಕು ಕಡೆಗಳಿಂದ ಬರುತ್ತವೆ. ಅವುಗಳನ್ನೆಲ್ಲಾ ನೀವೆ ಸ್ವೀಕರಿಸಿ ನಮ್ಮ ಆಂತರ್ಯದಲ್ಲಿ ದೃಢ ಶ್ರದ್ಧೆ ಭಕ್ತಿ ಇಟ್ಟು ನಮ್ಮನ್ನು ಮುಟ್ಟಿ ಪೂಜಾದಿಗಳನ್ನು ಸಲ್ಲಿಸಿ ಹೋಗುತ್ತೀರಿ ನೀವು ನಮಗೂ ಸ್ವಾಮಿಗಳಾಗುತ್ತೀರಿ ಹಿರಿ ದೊರೆಯ ಮಗ ಹಿರಿಗುರು ರಾಜೇಂದ್ರ ಸ್ವಾಮಿಗಳು ಮಳವಳ್ಳಿ ಸ್ವಾಮಿಗಳಾಗಿ ಕಿರಿದೊರೆಯ ಮಗ ರಾಜಪಟ್ಟದ ವಿರಭದ್ರಸ್ವಾಮಿಗಳೇ ಬೊಪ್ಪಣಪುರದ ಸ್ವಾಮಿಗಳಾಗಿರಪ್ಪ ಅವರೊಂದುವರುಷ ನೀವೊಂದು ವರುಷ ಜಾತ್ರೆಯನ್ನು ನಡೆಸಿಕೊಂಡು ನಮ್ಮ ಹೆಸರಿನಲ್ಲಿ ಬರುವ ಕಾಣಿಕೆಯನ್ನು ನೀವೇ ಸ್ವೀಕರಿಸಿಕೊಂಡು ಪರಂಪರೆಯೆಲ್ಲೆಲ್ಲಾ ಮಾರ್ಗದರ್ಶಕರಾಗಿ ಬಾಳಿರಿ ಎಂದು ಹೆಸರಿಸುತ್ತಾರೆ. ಇಲ್ಲಿಂದ ಮುಂದೆ ಈ ಮನೆತನದವರು ಅನುಕ್ರಮವಾಗಿ ಜಾತ್ರೆಯನ್ನು ಪ್ರತಿವರ್ಷವೂ ನಡೆಸಿಕೊಂಡು ಬರುತ್ತಿದ್ದಾರೆ. ಸ್ವಾಮಿಗಳ ಪಟ್ಟವು ವಂಶಪಾರಂಪರ್ಯವಾಗಿ ನಡೆದುಕೊಂಡು ಬರುತ್ತದೆ. ಈ ಪಟ್ಟವು ಒಬ್ಬರಾದ ನಂತರ ಅದರ ಹಿರಿಯ ಮಗನಿಗೆ ಸಲ್ಲುತ್ತದೆ. ಇಲ್ಲಿಯವರೆಗೆ ಸುಮಾರು ಮಳವಳ್ಳಿ ಸ್ವಾಮಿಗಳು ೫ ಬೊಪ್ಪೆಗೌಡನಪುರದ ಸಂತತಿಯವರು ೫ ಒಟ್ಟು ಹತ್ತು ತಲೆಮಾರುಗಳಾಗಿದೆ ಎಂದಿದ್ದಾರೆ.

**ಕಪ್ಪಡಿ ಜಾತ್ರಾ ಸಮಯದಲ್ಲಿ ವಿಶೇಷ ಪೂಜೆ**

ಈ ಸ್ವಾಮಿಗಳು ತಾವು ಬೊಪ್ಪೇಗೌಡನ ಪುರದ ಮಠದಿಂದ ಬರುವಾಗಲೇ ತಮ್ಮ ಜೊತೆಯಲ್ಲಿ ಸಿದ್ಧಪ್ಪಾಜಿಯ ಕಂಡಾಯ ಓಲೆಗರಿಗಳು ಉರಿಗದ್ದುಗೆಯ ಮೇಲೆ ಹಾಡುವ ಹುಲಿಯ ಮುಖವುಳ್ಳ ಚರ್ಮ ಹಾಗೂ ಕೂರಲು ದಿಂಬು ಇವುಗಳನ್ನು ತೆಗೆದುಕೊಂಡು ಬರುತ್ತಾರೆ. ಬರುವಾಗ ಬಿರುದು ಬಾವಲಿಗಳೊಡನೆ ಬಸವನನ್ನು ಮುಮದೆ ಬಿಟ್ಟುಕೊಂಡು ದಾರಿಯ ಉದ್ದಕ್ಕೂ ಪೂಜೆ ಸ್ವೀಕರಿಸುತ್ತಾ ಕಪ್ಪಡಿ ಕ್ಷೇತ್ರವನ್ನು ಮೊದಲು ಪ್ರವೇಶಿಸುತ್ತಿದ್ದರು. ಆದರೆ ಇತ್ತೀಚೆಗೆ ನಡೆದುಕೊಂಡು ದರ್ಶನ ಕೊಡುತ್ತಾ ಬರುವುದಿಲ್ಲ. ಕಾರಿನಲ್ಲಿ ಬಂದಿಳಿಯುತ್ತಾರೆ ಎಲ್ಲಾ ಸಾಂಕೇತಿಕವಾದ ಆಚರಣೆಯಾಗಿ ಬಿಟ್ಟಿದೆ.

ಜಾತ್ರೆಯ ಸಮಯದಲ್ಲಿ ವಿಶೇಷ ಪೂಜೆ ಶಿವರಾತ್ರಿ ಹಬ್ಬದಿಂದ ಇಲ್ಲಿ ಪೂಜೆ ಪ್ರಾರಂಭವಾಗುತ್ತದೆ. ಇಲ್ಲಿ ಶಿಷ್ಟ ಪೂಜೆಯಾದರೆ ಅದಕ್ಕೆ ನಿರ್ದಿಷ್ಟ ಅವರ ತಿಥಿ, ನಕ್ಷತ್ರ, ಗಳಿಗೆಯ ಅನುಸಾರವಾಗಿಯೇ ನಡೆಯುತ್ತದೆ. ಆದರೆ ಕಪ್ಪಡಿಯ ಪೂಜಾ ವಿಧಾನ ಬೇರೆಯದಕ್ಕಿಂತ ಭಿನ್ನವಾಗಿದೆ. ಜನರು ಯಾವುದನ್ನು ಅಶುಭ ಎನ್ನುತ್ತಾರೋ ಅದಿಲ್ಲಿ ಶುಭ ಅಂದರೆ ಅಮಾವಾಸ್ಯೆ ರಾಹುಕಾಲ, ಮಂಗಳವಾರ ಇವೆಲ್ಲಾ ಅಶುಭ ಎಂದು ಆದರೆ ಇಲ್ಲಿ ಈ ರೀತಿ ಯಾವುದೇ ನಿಯಮವಿಲ್ಲದೆ ಸಮಯವಿಲ್ಲದೆ ಪೂಜಾಕಾರ್ಯ ನೆರವೇರಿಸುತ್ತಾರೆ. ಈ ದೇವರಿಗೆ ಅಮಾವಾಸ್ಯೆ, ಹುಣ್ಣಿಮೆ, ರಾಹುಕಾಲಗಳೇ ಹೆಚ್ಚು ಪ್ರಿಯ.

ಶಿವರಾತ್ರಿ ದಿನ ಮೊದಲು ರಾಚಪ್ಪಾಜಿ ಗದ್ದುಗೆ, ಚೆನ್ನಾಜಮ್ಮನವರ ಗದ್ದುಗೆ ಹಾಗೂ ಉರಿಗದ್ದುಗೆಯನ್ನು ತೊಳೆದು ಸಾಮಾನ್ಯವಾಗಿ ಪೂಜೆಯನ್ನು ಎಲ್ಲರೂ ಬೆಳಿಗ್ಗೆಯೇ ಪ್ರಾರಂಭಿಸುವಂತೆ ಮುಂಜಾನೆ ಪ್ರಾರಂಭವಾಗುತ್ತದೆ. ಸ್ವಾಮಿಗಳು ಅಲ್ಲೇ ಇರುವ ಕಾವೇರಿ ನದಿಯಲ್ಲಿ ಮಿಂದು ಕಚ್ಚೆ ಪಂಚೆ, ಮೇಲೊಂದು ಹೊದಿಯಲು ಕೆಂಪುವಸ್ತ್ರ ಹಾಗೂ ತಲೆಗೆ ಪೇಟ ಧರಿಸುತ್ತಾರೆ. ಮಡಿಯುಟ್ಟ ನಂತರ ರಾಚಪ್ಪಾಜಿಯವರ ಗದ್ದುಗೆಯಲ್ಲಿ ಪೂಜೆ ಮಾಡುತ್ತಾರೆ ಅದರಲ್ಲಿ ಅವರು ತಂದ ಓಲೆಗರಿಗಳನ್ನು ಪೂಜಿಸುತ್ತಾರೆ. ಹೂವು ಗಂಧಾಕ್ಷತೆಗಳಿಂದ ಪೂಜಿಸುತ್ತಾ ಅಷ್ಟೋತ್ತರ ಮಂತ್ರಗಳನ್ನು ಜಪಿಸುತ್ತಾರೆ. ರಾಚಪ್ಪಾಜಿಗೆ ಸಂಬಂಧಪಟ್ಟ ಹಾಡುಗಳನ್ನು ಹಾಡುತ್ತಾರೆ. ಆದರೆ ವಿಶೇಷವೆಂದರೆ ಜಾತ್ರೆ ಪ್ರಾರಂಭವಾದ ದಿನಗಳಿಂದ ಮುಗಿಯುವವರೆಗೆ ಈ ದೇವಸ್ಥಾನದಲ್ಲಿ ಕಾಯಿ ಒಡೆಯುವಂತಿಲ್ಲ ಹಣ್ಣಿನ ತೊಟ್ಟು ಮುರಿಯುವಂತಿಲ್ಲ. ತೆಂಗಿನಕಾಯಿಯನ್ನು ಉಂಡೆಕಾಯಿಯಾಗಿಯೇ ಭಕ್ತರಿಗೆ ಪ್ರಸಾದ ರೂಪದಲ್ಲಿ ನೀಡುವುದು ವಾಡಿಕೆ.

ರಾಚಪ್ಪಾಜಿ ಸನ್ನಿಧಿಯಲ್ಲಿ ಸ್ವಾಮಿಗಳಿಗೆ ಮಾತ್ರ ಪ್ರವೇಶವಿರುತ್ತದೆ. ಇದನ್ನು ಜಾತ್ರೆಯ ಸಮಯದಲ್ಲಿ ಮುಚ್ಚಿರುತ್ತಾರೆ. ಏಕೆಂದರೆ ರಾಚಪ್ಪಾಜಿಗೆ ಸದ್ದು ಗದ್ದಲವಾಗ ಬಾರದಂತೆ ಆದ್ದರಿಂದ ಮುಚ್ಚಿರುತ್ತಾರೆ ಎಂದು ಅಲ್ಲಿಯವರೇ ಹೇಳುತ್ತಾರೆ.

ನಂತರ ಚೆನ್ನಾಜಮ್ಮನವರ ಗದ್ದುಗೆಯಲ್ಲಿ ಇದೇ ರೀತಿ ಪೂಜಿಸುತ್ತಾರೆ. ಪೂಜೆಯಾದ ಮೇಲೆ ನೈವೇದ್ಯಕ್ಕೆಂದು ಅರಮನೆಯ ಭೋಜನದ ರೀತಿಯಲ್ಲಿ ನಾಲ್ಕು ರೀತಿಯ ಸಿಹಿ ತಿಂಡಿಗಳು, ಅನ್ನ, ಸಾರು, ಪಾಯಸ, ಹಪ್ಪಳ. . .. ಇತ್ಯಾದಿ. ಇದರಿಂದ ರಾಚಪ್ಪಾಜಿಗೆ ಬೇರೆ ಚೆನ್ನಾಜಮ್ಮನವರಿಗೆ ಬೇರೆ ಬೇರೆ ಇಟ್ಟು ಎಡೆ ತೋರುತ್ತಾರೆ. ರಾಚಪ್ಪಾಜಿಯ ಗದ್ದುಗೆಗೆ ನೈವೇದ್ಯ ಮಾಡಿಯಾದ ಮೇಲೆ ಅದನ್ನು

ಯಾರೂ ಸ್ವೀಕರಿಸುವಂತಿಲ್ಲ. ಅದನ್ನು ನದಿಗೆ ಬಿಡುತ್ತಾರೆ. ಅದನ್ನು ಸ್ವೀಕರಿಸಿದರೆ ತಲೆ ಸುತ್ತು ಬರುತ್ತದಂತೆ, ಚೆನ್ನಾಜಮ್ಮನವರಿಗೆ ತೋರಿದ ನೈವೇದ್ಯವನ್ನು ಸ್ವೀಕರಿಸಬಹುದು. ಆದರೆ ರಾತ್ರಿ ಹೊತ್ತು ಮತ್ತೆ ಇದೇ ರೀತಿ ಪೂಜೆ ಸಲ್ಲಿಸಿಯಾದ ಮೇಲೆ ನೈವೇದ್ಯಕ್ಕೆಂದು ಫಲಹಾರ ಮಾತ್ರ ನೀಡಲಾಗುತ್ತದೆ. ಸೇಬು, ದ್ರಾಕ್ಷಿ, ಅನಾನಸು, ಸಪೋಟ, ಕಿತ್ತಳೆ ಮುಂತಾದ ೫ ರೀತಿಯ ಹಣ್ಣುಗಳಿಂದ ನೈವೇದ್ಯ ಮಾಡಲಾಗುತ್ತದೆ.

ಸ್ವಾಮಿಗಳು ಇವೆರಡಕ್ಕೆ ಪೂಜೆ ಸಲ್ಲಿಸಿಯಾದನಂತರ ಉರಿಗದ್ದುಗೆಯ ಹತ್ತಿರ ಬರುವಾಗ ಅರಮನೆಯಲ್ಲಿ ಅಂಗರಕ್ಷಕರು ಧರಿಸುವ ವೇಶವನ್ನು ಧರಿಸಿ ಇವರ ಅಕ್ಕಪಕ್ಕದಲ್ಲಿ ಬರುತ್ತಾರೆ ಮುಂದೆ ತಮಟೆ ಬಾರಿಸುವವರು, ಬ್ಯಾಂಡ್ ಸೆಟ್‌ಗಳನ್ನು ಬಾರಿಸುವವರು, ಕೊಂಬು, ಕಹಳೆಯವರು ಸಹ ಸಮವಸ್ತ್ರ ಧರಿಸುತ್ತಾರೆ. ವಾದ್ಯಗಳನ್ನು ಬಾರಿಸುತ್ತಾರೆ. ಇದು ಅರಮನೆಯಲ್ಲಿ ನಡೆಯುವ ರಾಜಮರ್ಯಾದೆಯಂತೆಯೇ ಇರುತ್ತದೆ.

ಸ್ವಾಮಿಗಳು ಉರಿಗದ್ದುಗೆಯ ಮೇಲೆ ಕೂರುವುದಕ್ಕಿಂತ ಮೊದಲು ಬಸವಣ್ಣನಿಗೆ ಪೂಜೆ ಸಲ್ಲಿಸುತ್ತಾರೆ. ನಂತರ ಉರಿಗದ್ದುಗೆಗೆ ಬರುತ್ತಾರೆ. ಕಪ್ಪಡಿಯಲ್ಲೇ ವಿಶೇಷ-ವಾಗಿರುವ ಭಕ್ತರ ಆಕರ್ಷಣೆಯ ಕೇಂದ್ರ ಈ ಉರಿಗದ್ದುಗೆ. ಇದಕ್ಕೆ ಮೊದಲು ಭತ್ತವನ್ನು ಎರಚಿದರೆ ಅವಲಾಗುತ್ತಿತ್ತು ಎಂಬ ನಂಬಿಕೆಯಿದೆ. ಇಂತಹ ಉರಿಗದ್ದುಗೆಯ ಮೇಲೆ ಕೂರುವುದಕ್ಕಿಂತ ಮೊದಲು ಅದಕ್ಕೆ ಪೂಜೆ ಸಲ್ಲಿಸಿ ನಂತರ ಅದರ ಮೇಲೆ ಕೂರುತ್ತಾರೆ. ಇವರು ರುದ್ರಾಕ್ಷಿ ಮಣಿಯನ್ನು ಎಣಿಸುತ್ತಾರೆ. ಅದು ಎಣಿಸಿ ಆದಮೇಲೆ ಅಲ್ಲಿಂದ ಏಳುತ್ತಾರೆ. ರುದ್ರಾಕ್ಷಿ ಮಣಿಯನ್ನು ಎಣಿಸಿಯಾದ ಮೇಲೆ ಅಲ್ಲಿ ಕ್ಷಣ ಕಾಲವೂ ಕೂರುವಂತಿಲ್ಲ ಕುಳಿತರೆ ಅವರ ಉರಿಯಿಂದ ಸುಟ್ಟು ಹೋಗುತ್ತಾರೆ ಎಂಬ ನಂಬಿಕೆ ಇದೆ. ಇಲ್ಲಿ ಉರಿಗದ್ದುಗೆಯ ಮೆಲೆ ಕೂರುವುದನ್ನು ನೋಡಲು ಸಾವಿರಾರು ಜನ ನೂಕುನುಗ್ಗಲುಗಳಿಂದ ಒಬ್ಬರ ಮೇಲೊಬ್ಬರು ಬಿದ್ದು ಬಿದ್ದು ಅದಾವ ಅರಿವಿಲ್ಲದೆ ಇವರಿಗೆ ಅದರ ಮೇಲಿರುವ ಭಕ್ತಿ ಇದೆ ಎಂಬಂತೆ ನಮಸ್ಕರಿಸುತ್ತಾರೆ. ಇದರಿಂದ ಅಲ್ಲಿಯ ಜನರ ಮನಸ್ಸಿನಲ್ಲಿ ಭಕ್ತಿಯೇ ಆಳದ ಅರಿವಾಗುತ್ತದೆ.

ಇದೇ ರೀತಿ ಬೆಳಿಗ್ಗೆ ಮತ್ತು ಸಾಯಂಕಾಲ ಅರಸು ಮನೆತನದ ಸ್ವಾಮಿಗಳು ಪೂಜೆ ನಡೆಸುತ್ತಾರೆ. ಜಾತ್ರೆ ಮುಗಿಯುವ ಅಂದರೆ ಮಾದ್ಲಿ ಪ್ರಸಾದದ ಮರುದಿನ ವಿಶೇಷ ಪೂಜೆ, ಮಹಾಮಂಗಳಾರತಿ ಕಾರ್ಯಕ್ರಮವಿರುತ್ತದೆ. ಆದಿನ ಬೆಳಿಗ್ಗೆಯೇ ಪೂಜೆ ಪ್ರಾರಂಭವಾಗುತ್ತದೆ. ರಾಚಪ್ಪಾಜಿಯವರ ಗದ್ದುಗೆಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ ಇದಕ್ಕೆ ನೂರೊಂದು ಲೀಟರ್ ಹಾಲು, ಜೇನುತುಪ್ಪ, ಸಕ್ಕರೆ, ೧೦೧

ಎಳನೀರು, ಮೊಸರು ಮುಂತಾದವುಗಳಿಂದ ಅಭಿಷೇಕ ಮಾಡುತ್ತಾರೆ. ಒಂದಾರತಿಯಲೆಂದ ದಶಾರತಿ ಮಾಡಿ ಕೊನೆಯಲ್ಲಿ ಮಹಾಮಂಗಳಾರತಿ ಮಾಡುತ್ತಾರೆ. ಈ ಸಮಯದಲ್ಲಿ ರಾಚಪ್ಪಾಜಿ ಸಂಬಂಧಪಟ್ಟ ವಚನಗಳು, ಹಾಡುಗಳು, ಅಷ್ಟೋತ್ತರ ಮಂತ್ರಗಳನ್ನು ಜಪಿಸುತ್ತಾ ವಿಶೇಷ ಪೂಜೆ ಸಲ್ಲಿಸುತ್ತಾರೆ. ಅರಸು ಮನೆತನದವರು ಜಾತ್ರೆಯ ಸಮಯದಲ್ಲಿ ಸಲ್ಲಿಸುವ ಪೂಜೆ ಇದಾಗಿರುತ್ತದೆ.

ಕಪ್ಪಡಿ ಕ್ಷೇತ್ರಕ್ಕೆ ಹಿಂದೂ ಧರ್ಮದವರು ಮಾತ್ರ ಪೂಜೆಸಲ್ಲಿಸುವುದಿಲ್ಲ. ಮುಸ್ಲಿಮರು ಬಂದು ಇಲ್ಲಿ ದೇವರ ಮುಂದೆ ನಮಾಜು ಮಾಡುತ್ತಾರೆ. ಸಾಮಾನ್ಯವಾಗಿ ಮುಸ್ಲಿಂರು ದೇವರ ಆರಾಧನೆಯಲ್ಲಿ ಉಗ್ರವಾದಿಗಳು ಬೇರೆ ದೇವರನ್ನು ಪೂಜಿಸುವುದಿಲ್ಲ. 'ಅಲ್ಲಾ' ಒಬ್ಬನೇ ಅವರ ದೇವರು ಆದರು ಕಪ್ಪಡಿಯಲ್ಲಿ ಇವರು ಜಾತ್ರೆಯ ಸಮಯದಲ್ಲಿ ಬಂದು ಪೂಜೆಯನ್ನು ಮಾಡುವುದು ನಿಜಕ್ಕೂ ಒಂದು ರೀತಿಯ ವಿಶಿಷ್ಟತೆಯೋ ಎಂಬಂತೆ ಎರಡು ಧರ್ಮಗಳ ನಡುವೆ ಇರುವ ಸೌಹಾರ್ದ ಮನೋಭಾವನೆಯು ಇಂದು ಭಾರತದಾದ್ಯಂತ ತಾಂಡವವಾಡುತ್ತಿರುವ ಮತೀಯ ಸಂಘರ್ಷ ಶಮನಕ್ಕೆ ಮಹಾ ಮದ್ದಾಗಬಹುದಾಗಿದೆ.

### ಮಾದ್ಲಿ ಪ್ರಸಾದ

ಕಪ್ಪಡಿ ಜಾತ್ರೆ ಯುಗಾದಿ ಹಬ್ಬ ಇನ್ನು ಐದು ದಿನ ಇರುವಾಗಲೇ ಅಥವಾ ಮೂರುದಿನ ಮುಂಚಿತವಾಗಿಯೇ ಜಾತ್ರೆ ಕೊನೆಗೊಳ್ಳುತ್ತದೆ. ಆ ದಿನ ಅರಸು ಮನೆತನದ ಸ್ವಾಮಿಗಳ ಸಮ್ಮುಖದಲ್ಲಿ ಈ ಮಾದ್ಲಿ ಪ್ರಸಾದ ವಿನಿಯೋಗ ಏರ್ಪಡುತ್ತದೆ. ಮಾದ್ಲಿ ಪ್ರಸಾದವೆಂದರೆ ಇದಕ್ಕೆ ಕಡಲೇಕಾಳು, ಹೆಸರುಕಾಳು, ಎಳ್ಳು ಇವುಗಳನ್ನು ನೀರಿನಲ್ಲಿ ನೆನಸಿ ನಂತರ ಇದಕ್ಕೆ ಕಜ್ಜಾಯ, ಬೆಲ್ಲ, ಕಾಯಿಚೂರುಗಳನ್ನು ಸೇರಿಸಿ ತಯಾರು ಮಾಡುತ್ತಾರೆ. ಇದು ಮತ್ಯಾವ ದೇವಸ್ಥಾನದಲ್ಲೂ ಸಿಗದ ವಿಶಿಷ್ಟ ರೀತಿಯ ಮಾದ್ಲಿ ಪ್ರಸಾದವಾಗಿದೆ.

ಇದನ್ನು ರಾಚಪ್ಪಾಜಿಯ ಗದ್ದುಗೆಯ ಪಕ್ಕದಲ್ಲಿರುವ ಜಗುಲಿಯನ್ನು ತೊಳೆದು ಶುದ್ಧ ಮಾಡಿದ ನಂತರ ಇವೆಲ್ಲವನ್ನು ಸೇರಿಸಿ ಕಲಿಸುತ್ತಾರೆ. ಈ ರೀತಿ ಕಲೆಸಿದ ಮಾದ್ಲಿ ಪ್ರಸಾದದ ರಾಶಿಗೆ ಸ್ವಾಮಿಗಳು ನದಿಯಲ್ಲಿ ಮಿಂದು ಮಡಿಯುಟ್ಟು ಮಾದ್ಲಿ ಪ್ರಸಾದದ ರಾಶಿಯನ್ನು ಪೂಜಿಸುತ್ತಾರೆ. ಹೂವು, ಕುಂಕುಮ, ಗಂಧಾಕ್ಷತೆಗಳಿಂದ ಪೂಜೆ ಸಲ್ಲಿಸಿಯಾದ ಮೇಲೆ ಮೊದಲು ಮಂಗಳಾರತಿ ಮತ್ತು ಪ್ರಸಾದವನ್ನು ಸ್ವಾಮೀಜಿ ಯವರು ಮತ್ತು ಅವರ ಕುಟುಂಬದವರು. ತೆಗೆದುಕೊಂಡ ನಂತರ ಬೇರೆಯವರಿಗೆ ನೀಡಲಾಗುತ್ತದೆ.

ಈ ಪ್ರಸಾದವು ವರ್ಷಕ್ಕೆ ಒಂದೇ ಬಾರಿ ಸಿಗುವುದರಿಂದ ಇದನ್ನು ಪಡೆಯಲು ನಾನಾ ಕಡೆಯಿಂದ ಸಾವಿರಾರು ಜನ ಭಕ್ತರು ಪ್ರಸಾದ ಸ್ವೀಕರಿಸಲು ಬರುತ್ತಾರೆ. ಆ ಪ್ರಸಾದ ಎಂದು ಕೊರತೆಯಾಗುವುದಿಲ್ಲ ಎಂಬುದು ಜನರ ಅಭಿಪ್ರಾಯ ಅಷ್ಟು ಮಾತ್ರವಲ್ಲ ಎಷ್ಟು ಜನ ಭಕ್ತರು ಬರುತ್ತಾರೋ ಅಷ್ಟಷ್ಟು ಹುಲುಸಾಗುತ್ತದೆ ಎಂಬ ನಂಬಿಕೆ ಇದೆ. ಇದಕ್ಕೆ ರಾಚಪ್ಪಾಜಿಯವರ ಮಹಿಮೆ ಕಾರಣ ಎಂದು ಅಲ್ಲಿ ಜನ ಹೇಳುತ್ತಾರೆ. ಇದು ಈ ಮಾಧ್ಲಿ ಪ್ರಸಾದದ ವಿಶೇಷ.

ಮಾಧ್ಲಿ ಪ್ರಸಾದ ವಿನಿಯೋಗ ಮಾಡುವ ದಿನವೇ ಸ್ವಾಮಿಗಳ ದರ್ಶನವು ಕೊನೆಯ ದಿನವಾದ್ದರಿಂದ ಅವರ ದರ್ಶನ ಮಾಡಲು ಭಕ್ತರ ಜನಜಂಗುಳಿ ಹೆಚ್ಚು ಇದಕ್ಕಾಗಿ ಜನರ ನೂಕುನುಗ್ಗಲಾಟಗಳು ಅಷ್ಟಿಷ್ಟಲ್ಲ ವಿಶೇಷ ಪೊಲೀಸ್ ಪಡೆಯ ವ್ಯವಸ್ಥೆ ಇದೆ. ಪೊಲೀಸಿನವರು ಸರದಿಯ ಪ್ರಕಾರ ಒಬ್ಬೊಬ್ಬರನ್ನು ಬಿಟ್ಟರು. ಬೆಳಿಗ್ಗೆಯಿಂದ ಸಾಯಾಂಕಾಲದವರೆಗೆ ಆಶೀರ್ವಾದ ಪಡೆಯಲು ಹವಣಿಸುವುದನ್ನು ನೋಡಿದರೆ ಅಲ್ಲಿಯ ಜನರ ಭಕ್ತಿಯ ಸ್ವಭಾವ ಅರಿವಿಗೆ ಬರುತ್ತದೆ. ಭಕ್ತರು ತಮ್ಮ ಕೈಲಾದಷ್ಟು ಕಾಣಿಕೆಯನ್ನಿಟ್ಟು ಸ್ವಾಮೀಜಿಗಳ ದರ್ಶನ ಪಡೆಯುತ್ತಾರೆ.

ಈ ಮಾಧ್ಲಿ ಪ್ರಸಾದವು ಕಪ್ಪಡಿಯಲ್ಲಿ ಸಿಗುವ ವಿಶಿಷ್ಟ ರೀತಿಯ ಪ್ರಸಾದವಾಗಿದ್ದು ಮೊದಲು ಭಕ್ತರು ಇದನ್ನು ಇಲ್ಲೇ ಪಡೆಯಬೇಕಿತ್ತು. ಆದರೆ ಇತ್ತೀಚೆಗೆ ಅಲ್ಲೆ ಅದನ್ನೆಲ್ಲಾ ಪುಡಿ ಮಾಡಿ ಪೊಟ್ಟಣದ ಮೂಲಕ ಮಾರಾಟ ಮಾಡಿ ಹೆಚ್ಚು ಲಾಭ ಗಳಿಸುತ್ತಿದ್ದಾರೆ. ದೇವರು ಧರ್ಮ ಕೂಡಾ ಹೇಗೆ ವ್ಯಾಪಾರೀಕರಣಗೊಂಡಿವೆ ಎಂಬುದಕ್ಕೆ ಇದು ನಿದರ್ಶನವಾಗಿದೆ.

**ಆಚರಣೆಗಳು ಮತ್ತು ಸಂಪ್ರದಾಯಗಳು**

ಜಾನಪದ ಎನ್ನುವುದು ಮನೋರಂಜನೆಗಿಂತ ಹೆಚ್ಚಾಗಿ ಒಂದು ಸಂಪ್ರದಾಯ ವನ್ನು ಉಳಿಸುವಲ್ಲಿ ಆಸಕ್ತವಾದದ್ದು ಯಾವುದೂ ಒಂದು ಆಚರಣೆ ಮೊದಲು ಮನರಂಜನೆಯ ದೃಷ್ಟಿಯಿಂದ ಹುಟ್ಟಿಕೊಂಡಿದ್ದು ನಂತರ ಅದು ಸಾಂಪ್ರದಾಯಕ ಆಚರಣೆಯಾಗಿರಬಹುದು. ಇಂತಹ ಆಚರಣೆಗಳನ್ನು ಜಾನಪದರು ಎಷ್ಟೇ ಕಷ್ಟ ಬಂದರು ಬಿಡುವುದಿಲ್ಲ.

ಪ್ರಾಣಿಬಲಿ ಬಹು ಪ್ರಾಚೀನ ಕಾಲದಿಂದಲೂ ಜನರು ಆಚರಿಸಿಕೊಂಡು ಬಂದಿರುವ ಒಂದು ಪದ್ಧತಿ ಅಂದರೆ ಆದಿ ಮಾನವನು ಪ್ರಕೃತಿಯ ವಿಕೋಪಕ್ಕೆ ಹೆದರಿ ಪ್ರಕೃತಿ ಪೂಜೆ ಮಾಡಿ ತಾನು ತಿನ್ನುತ್ತಿದ್ದ ದಿನಿತ್ಯದ ಆಹಾರವನ್ನು ದೇವರಿಗೂ

ಅರ್ಪಿಸಿದನು ಅಂದಿನ ಆಹಾರ ಪ್ರಾಣಿ ಪಕ್ಷಿಗಳೇ ಆಗಿತ್ತು. ಆ ನಂತರದಲ್ಲಿ ಪ್ರಾಣಿಬಲಿ ಒಂದು ಪದ್ಧತಿಯಾಗಿ ಮುಂದುವರಿದುಕೊಂಡು ಬಂದಂತೆ ತೋರುತ್ತದೆ.

ಆದರೆ ಅಲ್ಲಿನ ಆರಾಧಕರು ಹೇಳುವಂತೆ ಒಂದು ಸಾರಿ ಸಿದ್ದಾಪ್ಪಾಜಿಯವರು ಕಾಡಿನಲ್ಲಿ ಒಬ್ಬಂಟಿಯಾಗಿ ಪ್ರಯಾಣ ಮಾಡುತ್ತಿದ್ದಾಗ ಇದ್ದಕ್ಕಿದ್ದಂತೆ ಕಾಡಿನಲ್ಲಿದ್ದ ರಾಕ್ಷಸರು ಅವರನ್ನು ತಿನ್ನಲು ಬಾಯಿ ತೆರೆದು ಬಂದರಂತೆ ಆಗ ಸಿದ್ದಪ್ಪಾಜಿಯವರು ತಮ್ಮ ಜೋಳಿಗೆಯಲ್ಲಿದ್ದ ಕಪ್ಪು ಧೂಳ್ತವನ್ನು ಬೂದಿಯನ್ನು ಅವರ ಮೇಲೆ ಪ್ರೋಕ್ಷಣೆ ಮಾಡಿದಾಗ ರಾಕ್ಷಸರು ಮಂಕಾಗಿ ಕೆಳಗೆ ಬಿದ್ದರಂತೆ ಆಗ ಸ್ವಲ್ಪ ಹೊತ್ತಿನ ನಂತರ ರಾಕ್ಷಸರಿಗೆ ಎಚ್ಚರವಾದ ಮೇಲೆ ಸಿದ್ದಪ್ಪಜಿಯವರ ಮಹಾತ್ಮೆಯನ್ನು ಅರಿತು ನಾವು ನಿಮ್ಮ ಒಕ್ಕಲುತನದವರಾಗುತ್ತೇವೆ ಇನ್ನು ಮುಂದೆ ಯಾರನ್ನು ಕೊಲ್ಲುವುದಿಲ್ಲ ಆದರೆ ನಮಗೆ ಮುಂದೆ ಆಹಾರ ನೀಡುವವರು ಯಾರು ಎಂದಾಗ ಸಿದ್ದಾಪ್ಪಾಜಿಯವರು ವರ್ಷಕ್ಕೊಮ್ಮೆ ಕಪ್ಪಡಿಯಲ್ಲಿ ಜಾತ್ರೆ ನಡೆಯುವಾಗ ನನ್ನ ಭಕ್ತಾದಿಗಳು ಬಂದು ಅಲ್ಲಿ ಆಡು ಕುರಿಗಳನ್ನು ಬಲಿಯಾಗಿ ಅರ್ಪಿಸುತ್ತಾರೆ. ಅದು ನಿಮಗೆ ಆಹಾರವಾಗಲಿ ಎಂದು ಹೇಳುತ್ತಾರಂತೆ ಆದುದರಿಂದ ಅಲ್ಲಿ ಆಡುಕುರಿಗಳನ್ನು ಕಡಿದು ಮಾಂಸದ ಅಡಿಗೆಯನ್ನು ಹೆಚ್ಚು ತಯಾರಿಸುತ್ತಾರೆ ಎಂಬ ನಂಬಿಕೆ ಇದೆ. ಇದು ಮುಂದುವರಿದು ಬಂದು ಆಚರಣೆಯಾಗಿ ಬೆಳೆದು ಬಂದಿದೆ.

ಶಿವರಾತ್ರಿಯಿಂದ ಜಾತ್ರೆ ಪ್ರಾರಂಭವಾದ ೧೫ ದಿನಗಳ ತನಕ ಅಂದರೆ ಹುಣ್ಣಿಮೆಯವರೆಗೆ ಆಡುಕುರಿಗಳನ್ನು ಕಡಿದು ಅಡಿಗೆ ಮಾಡುವಂತಿಲ್ಲ ಏಕೆಂದರೆ ಈ ಸಮಯದಲ್ಲಿ ರಾಚಪ್ಪಾಜಿಯವರ ಭಕ್ತರುಗಳು ಮಿಂದು ಅಲ್ಲೆ ಕಾವೇರಿ ನದಿಯಲ್ಲಿ ಮಿಂದು ಪೂಜೆ ಸಲ್ಲಿಸಿ ಅಲ್ಲೇ ಮರದಡಿಯಲ್ಲೇ ರಾಚಪ್ಪಾಜಿಗೆ ಪ್ರಿಯವಾದ ಕಜ್ಜಾಯ ತುಪ್ಪವನ್ನು ತಯಾರು ಮಾಡಿ ನೈವೇದ್ಯ ಸಲ್ಲಿಸಿ ಅದನ್ನೇ ಊಟ ಮಾಡುವ ಪದ್ಧತಿ ಇದೆ ಇವರು ವರ್ಷಕ್ಕೊಮ್ಮೆ ಬಂದು ಈ ರೀತಿ ಮಾಡುವ ಸಂಪ್ರದಾಯ ಪರಂಪರಾನುಗತವಾಗಿ ನಡೆದುಕೊಂಡು ಬರುತ್ತದೆ. ೧೫ ದಿನಗಳ ನಂತರ ಹುಣ್ಣಿಮೆ ಕಳೆದ ಮೇಲೆ ಸಿದ್ದಪ್ಪಾಜಿಯ ಭಕ್ತರು ಬರುತ್ತಾರೆ. ಇವರಲ್ಲಿ 'ಗುಡ್ಡನನ್ನು ಬಿಡುವ' ಸಂಪ್ರದಾಯವಿದೆ. ಗುಡ್ಡನನ್ನು ಬಿಡುವುದು ಎಂದರೆ ಒಂದು ಕುಟುಂಬದಲ್ಲಿ ಏಳೆಂಟು ವರ್ಷದ ಬಾಲಕನಿಗೆ ತಲೆ ಮುಡಿ ಕೊಡಿಸಿ ಸ್ನಾನ ಮಾಡಿಸಿ ಗುರುಗಳ ಹತ್ತಿರ ದೀಕ್ಷೆಯನ್ನು ಕೊಡಿಸುತ್ತಾರೆ. ಹಾಗೂ ಸಿದ್ದಪ್ಪಾಜಿಯ ಒಕ್ಕಲಿನವರೆಂದು ಸಂಕೇತವಾಗಿ ಬೆತ್ತವನ್ನು ಕೊಡಲಾಗುತ್ತದೆ. ಈ ಬೆತ್ತವನ್ನು ದಿನ ನಿತ್ಯ ಮನೆಯಲ್ಲಿ ಮನೆಯಲ್ಲಿ ಪೂಜೆ ಮಾಡುತ್ತಾರೆ. ಹಾಗೆ ವರ್ಷಕ್ಕೊಮ್ಮೆ ಜಾತ್ರೆಯ ಸಮಯದಲ್ಲಿ ಅವರ ಕುಟುಂಬ ದವರೆಲ್ಲಾ ಬಂದು ಸ್ನಾನ ಮಾಡಿ ಬೆತ್ತವನ್ನಿಟ್ಟು ಅದಕ್ಕೆ ಪೂಜೆ ಸಲ್ಲಿಸಿ ಆಡು

ಕುರಿಯನ್ನು ಬಲಿ ಕೊಡುತ್ತಾರೆ. ನಂತರ ಮಾಂಸದ ಅಡಿಗೆ ಮಾಡಿ ಎಲ್ಲರೂ ಊಟ ಮಾಡುತ್ತಾರೆ. ಹೀಗೆ ಈ ಸಂಪ್ರದಾಯ ಅವರ ವಂಶ ಪಾರಂಪರ್ಯವಾಗಿ ನಡೆದು ಕೊಂಡು ಬರುತ್ತದೆ.

**ಕಪ್ಪಡಿ ಜಾತ್ರೆ ಇಂದಿನ ಒಂದು ನೋಟ**

ಕಪ್ಪಡಿ ಜಾತ್ರೆ ನೋಡಲು ಸುಂದರ ದೃಶ್ಯವನ್ನು ಒದಗಿಸುತ್ತದೆ. ಅಲ್ಲಿಯ ವೈವಿಧ್ಯಮಯ ದೃಶ್ಯಗಳು ಮನಸ್ಸನ್ನು ಅರಳಿಸಿದರು ವಿಚಾರಕ್ಕೆ ಎಡೆ ಮಾಡಿಕೊಡುತ್ತದೆ. ಸಾಮಾನ್ಯವಾಗಿ ಎಲ್ಲಾ ಜಾತ್ರೆಗಳಲ್ಲೂ ರಥೋತ್ಸವ ಕಾರ್ಯಕ್ರಮವಿರುತ್ತದೆ. ಆದರೆ ಕಪ್ಪಡಿಯಲ್ಲಿ ನಡೆಯುವ ಜಾತ್ರೆಯಲ್ಲಿ ತೇರನ್ನು ಎಳೆಯಲಾಗುವುದಿಲ್ಲ. ರಾಚಪ್ಪಾಜಿಯವರು ಅಲ್ಲಿ ಜೀವಂತವಾಗಿ ಐಕ್ಯವಾಗಿರುವುದರಿಂದ ಅವರು ಇನ್ನೂ ಬದುಕಿದ್ದಾರೆಂದೇ ನಂಬಿಕೆಯಾಗಿದೆ. ಹೀಗಾಗಿ ಪ್ರಾಯಶಃ ರಥೋತ್ಸವ ರೂಢಿಯಲ್ಲಿ ಇರಲಿಕ್ಕಿಲ್ಲ.

ಜಾತ್ರೆ ಪ್ರಾರಂಭವಾದ ದಿನಗಳಿಂದ ನಾನಾಕಡೆಯಿಂದ, ನಾನಾ ಊರುಗಳಿಂದ ಭಕ್ತರು ಬರುತ್ತಾರೆ. ಅಲ್ಲೇ ಸುತ್ತ ಮುತ್ತಲಿನ ಹಳ್ಳಿಯವರು ಬಮಡಿ ಹೂಡಿಕೊಂಡು ಹೊರಡುತ್ತಾರೆ. ಗಾಡಿಯಲ್ಲಿ ಸಂಸಾರವೇ ತುಂಬಿರುತ್ತದೆ. ಮರಿ, ಕುರಿ, ಪಾತ್ರೆ ಪಗಡಗಳನ್ನು ತುಂಬಿಕೊಂಡು ಕಪ್ಪಡಿ ಕ್ಷೇತ್ರಕ್ಕೆ ಬಂದು ಅಲ್ಲಿ ತಮಗೆ ಬೇಕಾದ ಮರದಡಿಯಲ್ಲಿ ಬಿಡಾರ ಹೂಡುತ್ತಾರೆ. ಜಾತ್ರೆಯ ದಿವಸಗಳಲ್ಲಿ ದೇವಸ್ಥಾನದಲ್ಲಿ ನಡೆಯುವ ವಿಶೇಷ ಪೂಜೆ ವಾದ್ಯಗಳ ಅಬ್ಬರ, ಗಿಜಿಗಿಜಿ ಎನ್ನುವ ಜನರು, ದೇವರಿಗೆ ಬಲಿಕೊಡುವಾಗ ಅರಚುವ ಕುರಿಕೋಳಿಗಳು, ಹೆಂಗಸರು ಮಕ್ಕಳು ಗಂಡಸರು ತಲೆಯನ್ನೇ ದೇವರಿಗೆ ಮುಡಿಕೊಟ್ಟು ನುಣ್ಣಗೆ ಮಾಡಿಸಿಕೊಂಡು ಓಡಾಡುವವರು ಇದು ಕಪ್ಪಡಿ ದೇವಾಲಯದ ಬಳಿಯ ಸಾಮಾನ್ಯ ನೋಟ.

ಒಂದು ಕಡೆ ಕಲ್ಲುಗಳ ಮೇಲೆ ಮಡಿಕೆಯಿಂದ ಒಲೆ ಮಾಡಿ ಮಾಂಸ ಕೊಯ್ದು ಅಡಿಗೆ ಮಾಡುವ ಹೆಂಗಸರು, ಈ ಮಾಂಸಕ್ಕೆ ಮುತ್ತುವ ನೊಣ ನಾಯಿಗಳನ್ನು ಓಡಿಸುವ ಪಡ್ಡೆ ಹುಡುಗರು, ಅಡುಗೆ ಮಾಡುವ ತಾಯಂದಿರು ಎದೆ ಕಚ್ಚಿರುವ ಹಸುಳೆಗಳು, ಹಾಗೆಯೇ ಕಾರ್ಯ ನಿರ್ವಹಿಸುತ್ತಿರುವ ತಾಯಂದಿರು ಇದಲ್ಲದೆ ಎಲ್ಲರೂ ಊಟಕ್ಕೆ ಕುಳಿತು ಗಲಾಟೆ ಜಗಳ ಮಾಡುವುದು ಅಗ್ಗದ ಕಳ್ಳು ಸಿಕ್ಕರೆ ಕುಡಿಯುವುದು ಮಾಂಸಕ್ಕಾಗಿ ಕಿತ್ತಾಟ. ಇದು ಒಂದು ಗುಂಪಿನಲ್ಲಿ ಅಥವಾ ಜನರಲ್ಲಿ ಕಂಡುಬರುವ ಕಪ್ಪಡಿ ಜಾತ್ರೆಯ ಸಾಮಾನ್ಯ ದೃಶ್ಯ ಮತ್ತೊಂದು ಕಡೆ ಹಳ್ಳಿಯ ಹೆಂಗಸರು ವಡೆ, ಚಕ್ಕುಲಿ, ಬೇಯಿಸಿ, ಮಾರುತ್ತಾ ಕುಳಿತಿರುವವರು, ಹರಕು ಮುರುಕು ಗುಡಿಸಿಲಿನಲ್ಲಿ

ಕಾಫಿ, ಕೊಯ್ದ ಹಣ್ಣುಗಳನ್ನು ಮಾರುವ್ರು, ಮಿಠಾಯಿ ಮಾರುವ ಅಂಗಡಿ, ಟೇಪು, ಸರ, ಚೌಲಿ, ಕರಿಮಣಿ, ಬಳೆ, ಸೂಜಿ, ದಬ್ಬಳ, ಗುಗ್ಗೆಕಡ್ಡಿ, ಚಿಮುಟ ಮುಂತಾದ ಜನಪದ ಅವಶ್ಯ ಸಾಮಾನು ಮಾರುವವರು.

ಮತ್ತೊಂದು ಕಡೆ ಸುತ್ತಲಿನ ನಗರಗಳಿಂದ ಬಂದ ಜನ ನಿತ್ಯೋಪಯೋಗಿ ವಸ್ತುಗಳ ಚಿಲ್ಲರೆ ಅಂಗಡಿ ಪುರಿ, ಖಾರ, ಬೆಂಡುಬತ್ತಾಸು, ಮೈಸೂರುಪಾಕ್, ಜಿಲೇಬಿ ಅಂಗಡಿಗಳು ಹಾಗೆಯೇ ಮಕ್ಕಳಿಗೆ ಆಟವಾಡಲು ಬಲೂನ್, ಪೀಪಿ, ಕನ್ನಡಕ, ಮುಂತಾದ ಆಟದ ಸಾಮಾನುಗಳು ರೆಡಿಮೇಡ್ ಬಟ್ಟೆಯವರು ತಲೆ ಮುಡಿಕೊಟ್ಟವರ ಬುರುಡೆಯನ್ನು ರಕ್ಷಿಸುವ ಟೋಪಿಗಳು ಕಪ್ಪಡಿ ರಾಚಪ್ಪಾಜಿ ಸಿದ್ದಪ್ಪಾಜಿ ಚೆನ್ನಾಜಮ್ಮನವರ ಮಹಾತ್ಮೆ ಕುರಿತು ಕ್ಯಾಸೆಟ್‌ಗಳು, ಸಸ್ಯಹಾರಿ ಮತ್ತು ಮಾಂಸಹಾರಿ ಹೊಟೇಲ್‌ಗಳು ಮನರಂಜನೆ ನೀಡಲು ಸಿನಿಮಾ ಟೆಂಟ್‌ಗಳು ಸಾರಾಯಿ ಅಂಗಡಿ ಇವೆಲ್ಲಾ ಇಲ್ಲಿನ ಜಾತ್ರೆಯ ದೃಶ್ಯವಾಗಿದೆ.

ಕಪ್ಪಡಿ ಜಾತ್ರೆ ದನಗಳ ಜಾತ್ರೆಯಲ್ಲ ಬರೀ ಜನಗಳ ಜಾತ್ರೆ. ಈ ಜಾತ್ರೆಗೆಂದು ಇಡೀ ಕಪ್ಪಡಿಯೇ ಹಸಿರು ತೋರಣ ರಂಗೋಲಿಗಳಿಂದ ಸಿಂಗಾರಗೊಳ್ಳುತ್ತದೆ. ವ್ಯಾಪಾರಿಗಳು ಅಂಗಡಿಗಳಿಗೆ ದೀಪಾಲಂಕಾರ ಮಾಡಿ ಜನರನ್ನು ಆಕರ್ಷಿಸುತ್ತಾರೆ. ಒಂದು ತಿಂಗಳ ಕಾಲ ಈ ಕ್ಷೇತ್ರದಲ್ಲಿ ಹಬ್ಬದ ವಾತಾವರಣವಿರುತ್ತದೆ. ಪೂಜೆ ಹರಕೆ ಪರಮ ಪ್ರಸಾದ ಸಾಂಗವಾಗಿ ನಡೆಯುತ್ತದೆ.

ಇಲ್ಲಿಯ ಜಾತ್ರೆಯ ದಿನಗಳಲ್ಲಿ ಜನ ಕಿಕ್ಕಿರಿದು ನೆರೆಯುತ್ತಾರೆ. ಕಾಣಿಕೆ ಒಪ್ಪಿಸುವುದು ಹರಕೆ ಮಾಡಿಕೊಳ್ಳುವುದು, ಮುಡಿ ತೆಗೆಸುವುದು ಇತ್ಯಾದಿ ನಂಬಿಕೆಗಳು ಎಲ್ಲಿ ನೋಡಿದರಲ್ಲಿ ಜನ.... ಜನ.... ಜನ... ಕಾಲಿಡಲು ಸ್ಥಳವಿರುವುದಿಲ್ಲ. ಇಲ್ಲಿ ಕೋಲಾಟಗಳು, ಜನಪದ ಮೇಳಗಳು ನಡೆಯುತ್ತವೆ.

ಪವಿತ್ರ ಬಲಿ ಪೂಜೆ ವಿಧಿಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ. ಹಾಗೆಯೇ ಅಲ್ಲಿಯ ಕೆಲವು ಸನ್ಯಾಸಿಗಳು ಬಂದ ಭಕ್ತಾದಿಗಳೆಲ್ಲರಿಗೂ ವಿಭೂತಿ ಮತ್ತು ಕಪ್ಪನ್ನು ಬಿಡದೆ ಹಣೆಗೆ ಇಡುತ್ತಾರೆ.

ಉರುಳು ಸೇವೆ ಭಿಕ್ಷೆ ಬೇಡುವುದು ಒಂದು ಕಡೆಯಾದರೆ ನಾನಾ ರೋಗಗಳಿಂದ ಗುಣಮುಖರಾದವರು ಹೂವು ಹಣ್ಣು ಕಾಣಿಕೆಗಳನ್ನು ಕೊಟ್ಟು ಹರಕೆ ತೀರಿಸುವರು. ಮತ್ತೊಂದು ಕಡೆ ತೀರ್ಥ ಪ್ರಸಾದ ಮೂಲ ನೆಲದ ಮಣ್ಣು ಮುಂತಾದವುಗಳನ್ನು ಸಂಗ್ರಹಿಸುವುದಕ್ಕೆ ಭಕ್ತರು ಪಡುವ ಪಾಡನ್ನು ನೋಡಬೇಕು. ಆ

ಜನಸ್ತೋಮಕ್ಕೆ ಬಯಲೆ ದೇವಾಲಯ ಭಕ್ತಿಯೇ ಇಲ್ಲಿ ಪ್ರಧಾನ. ರಾಚಪ್ಪಾಜಿಯ ಪವಾಡದ ಪ್ರತಿಮೆಯ ಅದ್ಭುತ ಶಕ್ತಿಯೇ ಎಲ್ಲಾ ಆತ್ಮಗಳ ಪ್ರಸಾಧನ.

**ನಂಬಿಕೆಗಳು ಮತ್ತು ಹರಕೆಗಳು**

ಮನುಷ್ಯ ತನ್ನ ಬದುಕಿನ ಆರಂಭದಿಂದಲೂ ಹಲವಾರು ಆಚರಣೆ ಪದ್ಧತಿಗಳನ್ನು ನಡೆಸುತ್ತಾ ಬಂದ ಅವುಗಳಿಗೆಲ್ಲಾ ಆತನ ಧಾರ್ಮಿಕ ಭಾವನೆಯೇ ಮುಖ್ಯ ಕಾರಣ ಮತ್ತು ಪ್ರೇರಣೆ ಎನ್ನಬಹುದು. ನಮ್ಮ ಬದುಕಿನ ಭಾಗವಾಗಿ ನಡೆಯುವ ಪ್ರತಿ ಆಚರಣೆ ಸಂಪ್ರದಾಯಗಳಲ್ಲೂ ಇಂತಹ ಧಾರ್ಮಿಕ ಭಾವನೆಗಳಿವೆ. ಕಾಲಕ್ರಮದಲ್ಲಿ ಈ ಭಾವನೆಗಳು ವಿಕಾಸಗೊಂಡಂತೆಲ್ಲಾ ಇವು ಬೇರೆ ಬೇರೆ ಸ್ವರೂಪವನ್ನು ಪಡೆದುಕೊಂಡವು.

ನಿಸರ್ಗದಲ್ಲಿ ಕಾಣಿಸಿಕೊಳ್ಳುವ ಗುಡುಗು, ಮಿಂಚು, ಮಳೆ ಇತ್ಯಾದಿಗಳ ಬಗೆಗೆ ಆದಿ ಮಾನವ ತನ್ನದೇ ಆದ ಅಭಿಪ್ರಾಯವನ್ನು ತಾಳಿದ, ಇವುಗಳ ಹಬ್ಬದ ಹಿಂದೆ ಬೆಳಕಿನ ಹಿಂದೆ ಯಾವುದೋ ಶಕ್ತಿಯ ಕೈವಾಡವಿದೆಯೆಂದು ಅವನು ಭಾವಿಸಿದ ಅಂಥಹ ಕಾಣದ ಶಕ್ತಿಯನ್ನು ಪೂಜಿಸತೊಡಗಿದ ಸಹಜವಾಗಿ ಕಾಣಿಸಿದ ಮರ ಮಣ್ಣು ಕಲ್ಲುಗಳಲ್ಲಿ ದೇವರ ಅಂಶವನ್ನು ಕಂಡಕೊಂಡು ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ ಕೆಲವರು ಆಚರಣೆಗಳನ್ನು ತನ್ನ ಬದುಕಿನ ಭಾಗವಾಗಿ ನೆರವೇರಿಸುತ್ತಾ ಬಂದ ಆಚರಣೆಗಳಲ್ಲಿ ನಂಬಿಕೆ ಬಹುಮುಖ್ಯ ಪಾತ್ರ ವಹಿಸುತ್ತದೆ. ಜಗತ್ತಿನ ಯಾವುದೇ ಭಾಗದ ಜನರ ಬದುಕನ್ನು ನೋಡಿದರೂ ಅವರ ಬದುಕಿನಲ್ಲಿ ಈ ನಂಬಿಕೆಗಳು ಹಾಸುಹೊಕ್ಕಾಗಿರುವುದನ್ನು ಕಾಣುತ್ತೇವೆ. ಒಟ್ಟಾರೆ ಹೇಳುವುದಾದರೆ ನಂಬಿಕೆಗಳು ಮನುಷ್ಯನ ಬದುಕಿನ ಬೆನ್ನೆಲುಬಾಗಿದೆ. ಕಪ್ಪಡಿ ಒಂದು ಧಾರ್ಮಿಕ ಕ್ಷೇತ್ರ ಈ ಪರಂಪರೆಗೆ ಸೇರಿದ ಒಂದು ದೊಡ್ಡ ಜಿನಸಮುದಾಯವಿದೆ. ಈ ಜನರಲ್ಲಿ ಇಲ್ಲಿನ ದೇವರನ್ನು ಕ್ಷೇತ್ರವನ್ನು ಕುರಿತು ಹಲವು ನಂಬಿಕೆಗಳಿವೆ. ಕಪ್ಪಡಿ ರಾಚಪ್ಪಾಜಿಯ ಗದ್ದುಗೆಯ ಮುಂದೆ ನಿಂತು ಸುಳ್ಳು ಪ್ರಮಾಣ ಮಾಡಿದರೆ ಆತನಿಗೆ ಏನಾದರೊಂದು ಕೇಡಾಗುವುದೆಂಬ ನಂಬಿಕೆ ಜನರ ಮನಸ್ಸಿನಲ್ಲಿ ಆಳವಾಗಿ ಬೇರೂರಿದೆ.

ಕೆ.ಆರ್.ನಗರ ತಾಲ್ಲೂಕು ಹಾಗೂ ಸುತ್ತ ಮುತ್ತಲಿನ ಪ್ರಾಂತ್ಯದಲ್ಲಿ ಆಸ್ತಿ–ಪಾಸ್ತಿ ವ್ಯವಹಾರಗಳಲ್ಲಿ ಲೋಪ ತಕರಾರು ಪ್ರಕರಣಗಳಾದಾಗ ಕುಟುಂಬದಲ್ಲಿ ಏನಾದರೂ ಘರ್ಷಣೆ ಒಡಕು ಪರಸ್ಪರ ಭಿನ್ನಾಭಿಪ್ರಾಯಗಳು ಉದ್ಭವಿಸಿದಾಗ ರಾಚಪ್ಪಾಜಿಯವರ ಗದ್ದುಗೆಯ ಮುಂದೆ ಆಣೆ ಪ್ರಮಾಣ ಮಾಡುವುದು ವಿಶೇಷವಾಗಿದೆ. ಗದ್ದುಗೆಯಲ್ಲಿ ಪ್ರಮಾಣ ಮಾಡಿ ಏನಾದರೂ ಸುಳ್ಳು ಹೇಳಿಕೆ ಆದಲ್ಲಿ, ಸುಳ್ಳು ಹೇಳಿದವನಿಗೆ

ನೇರವಾಗಿಯೋ ಅಥವಾ ಪರೋಕ್ಷವಾಗಿಯೋ ಏನಾದರೊಂದು ಶಿಕ್ಷೆಯಾಗುತ್ತದೆಂಬ ಬಲವಾದ ನಂಬಿಕೆ ಇದ್ದು ಮೈಸೂರು ಪ್ರಾಂತ್ಯದಲ್ಲಿ ಜನ ಜನಿತ ಕೋರ್ಟಿನಲ್ಲಿ ಇತ್ಯರ್ಥವಾಗದ ಎಷ್ಟೋ ಪ್ರಕರಣಗಳು ವ್ಯಾಜ್ಯಗಳು ಇಲ್ಲಿ ಭಕ್ತಿ ನಂಬಿಕೆ ಆಧಾರದಲ್ಲಿ ಸುಲಭವಾಗಿ ಬಗೆಹರಿದಿವೆ.

ಕಪ್ಪಡಿ ರಾಚಪ್ಪಾಜಿ ಗದ್ದುಗೆಯ ಮೇಲೆ ತಪ್ಪು ಮಾಡಿಯೂ ಸಹ ಪ್ರಮಾಣ ಮಾಡಿದ ಮೇಲೆ ಶಿಕ್ಷೆಯಾಗಿದೆ ಎಂಬುದಕ್ಕೆ ಅಲ್ಲಿನ ಭಕ್ತರು ಅನೇಕ ಪ್ರಕರಣಗಳನ್ನು ಸಾಕ್ಷಿಯಾಗಿ ಹೇಳುತ್ತಾರೆ. ಹಾಗೆಯೇ ಮದುವೆಯಾಗದ ಕನ್ಯೆಯರು ಮದುವೆಯಾಗ ಲೆಂದು ಹರಕೆ ಕಟ್ಟಿಕೊಂಡರೆ ಮದುವೆಯಾಗುತ್ತದಂತೆ ಮಕ್ಕಳಾಗದವರಿಗೆ ಮಕ್ಕಳಾಗುತ್ತದೆ. ರೋಗ ರುಜಿನಗಳು ಬಂದರೆ ರೋಗವಾಸಿಯಾಗುತ್ತದೆ. ಹುಲ್ಲು ಕಡ್ಡಿ ಇದ್ದರೆ ಅದು ಹರಕೆ ಕಟ್ಟಿಕೊಂಡ ಕೆಲವೇ ದಿನಗಳಲ್ಲಿ ಮಾಯವಾಗುತ್ತದೆ.

ಒಟ್ಟಾರೆ ಜನರಿಗೆ ತಮಗೆ ಯಾವುದೇ ರೀತಿಯ ತೊಂದರೆಯಾದಲ್ಲಿ ರಾಚಪ್ಪಾಜಿಯ ಸನ್ನಿಧಿಯಲ್ಲಿ ಹರಸಿಕೊಂಡರೆ ಕಷ್ಟ ಪರಿಹಾರವಾಗುತ್ತದೆಂಬ ಅಪಾರವಾದ ನಂಬಿಕೆ ಭಕ್ತರ ಮನದಲ್ಲಿದೆ.



**ಹರಕೆಗಳು:** 'ಸಂಕಟ ಬಂದಾಗ ವೆಂಕಟರಮಣ' ಎಂಬ ಗಾದೆ ಮಾತಿನಂತೆ ಮನುಷ್ಯನೆಂದ ಮೇಲೆ ಆತನ ಜೀವನದಲ್ಲಿ ಕಷ್ಟಸುಖಗಳು ಬಂದು ಹೋಗುತ್ತವೆ. ಆದರೆ ಕೆಲವೊಮ್ಮೆ ಆತನ ಜೀವನದಲ್ಲಿ ಕಷ್ಟಗಳ ಸರಮಾಲೆಯೇ ಅಧಿಕವಾದಾಗ ಅದನ್ನು ಮನುಷ್ಯ ನಿಮಿತ್ತದಿಂದ ಪಾರು ಮಾಡಲು ಅಸಾಧ್ಯ ಎಂದು ತಿಳಿದಾಗ ಭಕ್ತರು ದೇವರ ಮೊರೆ ಹೊಗುವುದುಂಟು. ಆಗ ಅವರು ದೇವರ ಸನ್ನಿಧಿಯಲ್ಲಿ ಅವನ ಹೆಸರು ಕೇಳಿ ಹರಕೆ ಕಟ್ಟಿಕೊಳ್ಳುತ್ತಾರೆ. ದೇವರು ಕಷ್ಟ ಕಾರ್ಪಣ್ಯಗಳನ್ನು ದಊರ ಮಾಡಿದಾಗ ಅವರು ಹರಕೆಯನ್ನು ತೀರಿಸುತ್ತಾರೆ. ಇದು ಒಂದು ರೀತಿ ದೇವರು ಮತ್ತು ಭಕ್ತರ ನಡುವೆ ಇರುವ ಕೊಡು-ಕೊಳ್ಳುವ ಸಂಬಂಧ.'

ಕಪ್ಪಡಿಯಲ್ಲಿ ರಾಚಪ್ಪಾಜಿ ಸಿದ್ದಪ್ಪಾಜಿ ಮತ್ತು ಚೆನ್ನಾಜಮ್ಮನವರ ಸನ್ನಿಧಿಯಲ್ಲಿ ಭಕ್ತರು ನಾನಾ ರೀತಿಯ ಹರಕೆ ಹೊರುತ್ತಾರೆ. ಮದುವೆಯಾಗದ ಕನ್ಯೆಯರು ಮದುವೆ ನೆರವೇರಿದ್ದಕ್ಕೆ ಚೆನ್ನಾಜಮ್ಮನ ಸನ್ನಿಧಿಗೆ ಸೀರೆ, ಚಿನ್ನದ ತಾಳಿ, ಬಳೆ, ಅರಿಸಿನ, ಕುಂಕುಮಗಳನ್ನು ಹರಕೆಯಾಗಿ ಒಪ್ಪಿಸುತ್ತಾರೆ.

ರೋಗ ರುಜಿನಗಳು ಬಂದವರು, ಮಕ್ಕಳಾಗದವರು, ಜೀವನಲದಲಿ ಯಾವುದಾದರೂ ಸಂಭವಿಸಿದ ಅನಾಹುತದಿಂದ ಪಾರಾದಾಗ ಹರಸಿಕೊಂಡಂತೆ ಭಕ್ತರು ನಾನಾ ವಿಧವಾಗಿ ಹರಕೆಗಳನ್ನು ಒಪ್ಪಿಸುತ್ತಾರೆ. ಮುಡಿಕೊಡುವುದು ಉರುಳು

ಸೇವೆ ಮಾಡುವುದು, ಕಾರ್ತಿಕ ಮಾಸದಲ್ಲಿ ದೀಪ ಹಚ್ಚುವುದು ೫ ಅಮಾವಾಸ್ಯೆ ಪೂಜೆ ಮಾಡಿಸುವುದು ಸನ್ನಿಧಿಯಲ್ಲಿ ಅಡಿಗೆ ಮಾಡಿ ಹತ್ತಾರು ಜನರಿಗೆ ಊಟಹಾಕಿಸುವುದು ತಟ್ಟೆ ತುಂಬಿಸುವುದು, ತಟ್ಟೆ ತುಂಬ ಕರ್ಪೂರ ಹಚ್ಚಿಸುವುದು, ಕುಂಕುಮಾರ್ಚನೆ ಮಾಡಿಸುವುದು, ಕಾಣಿಕೆ ಹಾಕುವುದು ಇವು ಇಲ್ಲಿ ಭಕ್ತರು ಸಲ್ಲಿಸುವ ಕೆಲವು ಹರಕೆ ಗಳಾಗಿವೆ.

ಕಪ್ಪಡಿಯಲ್ಲಿ ಹರಕೆ ಕಟ್ಟಿಕೊಂಡರೆ ಸಾಮಾನ್ಯವಾಗಿ ಅವರು ಅಂದುಕೊಂಡದ್ದು ಫಲಿಸುತ್ತದೆಂಬ ಅಪಾರ ನಂಬಿಕೆ ಇದ್ದು ದೂರ ದೂರದ ಊರಿನಿಂದ ಬಂದ ಜನರೆಲ್ಲರೂ ಇಲ್ಲಿ ಹರಕೆ ಕಟ್ಟಿಕೊಂಡು ತೀರಿಸುತ್ತಾರೆ. ಜಾತ್ರೆಯ ಸಮಯದಲ್ಲಿ ಇಲ್ಲಿ ಭಕ್ತರು ಬಂದು ಹರಕೆ ಕಟ್ಟಿಕೊಳ್ಳುವುದು ಮತ್ತು ಸಲ್ಲಿಸುವುದನ್ನು ನೋಡಿದರೆ ರಾಚಪ್ಪಾಜಿಯ ಪರಂಪರೆ ಜನಮನವನ್ನು ಎಷ್ಟು ಗಾಢವಾಗಿ ಆವರಿಸಿದೆ ಎಂದು ಗೊತ್ತಾಗುತ್ತದೆ.

## ನೀಲಗಾರರು

ಬದುಕಿನ ಭಾಗವಾಗಿ ಸಾಂಸ್ಕೃತಿ ಸಂಬಂಧಗಳನ್ನು ಕೊಂಡಿಯಾಗಿಸಿಕೊಂಡಿರುವ ಜಾತ್ರೆಗಳಲ್ಲಿ ವಿಪುಲವಾದ ಜನಪದ ಸಾಹಿತ್ಯ ಲಭ್ಯವಿದೆ. ಆರ್ಥಿಕ, ಐತಿಹಾಸಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಇತ್ಯಾದಿ ಹಲವು ಮುಖಗಳು ಜಾತ್ರೆಗಿದೆ. ತೀರಾ ಇತ್ತೀಚಿನವರೆಗೆ ಹಳ್ಳಿಗಳ ನಡುವೆ ಸಾಂಸ್ಕೃತಿಕ ಕೊಂಡಿಯಾಗಿದ್ದವರು ಬಳೆಗಾರರು, ಚೌಡಿಕೆಯವರು, ತೊಗಲುಗೊಂಬೆ ಗಾರುಡಿಗರು, ಕೋಲೆ ಬಸವನಾಡಿಸುವವರು, ಬುಡುಬುಡುಕೆಯವರು, ತಲೆಮಾರುಗಳ ಕಥೆ ಹೇಳುತ್ತಿದ್ದವರು ಇವರು ಹಳ್ಳಿಯಿಂದ ಹಳ್ಳಿಗೆ ಬಿಸಿಲು ಮಳೆ ಗಾಳಿಗಳೆನ್ನದೆ ನಡೆದು ಬರುತ್ತಿದ್ದರು ಒಮ್ಮೊಮ್ಮೆ ಇಬ್ಬನಿ ಹೊತ್ತಿನಲ್ಲಿ ಒಬ್ಬರೆ ಬರುತ್ತಿದ್ದರು ಇಂತಹ ಜಾನಪದ ಕಲಾವಿದರ ಪರಂಪರೆಯಲ್ಲಿ ನೀಲಗಾರರ ಪರಂಪರೆಯು ಒಂದು.

"ಸಾಂಸ್ಕೃತಿಕ ನಾಯಕ ಧರೆಗೆ ದೊಡ್ಡವರಾದ ಮಂಟೇಸ್ವಾಮಿ ಬಗೆಗಿನ ಕಾವ್ಯ ಕಥೆಗಳನ್ನು ನೀಲಗಾರರು ಹಾಡುತ್ತ ಬಂದಿದ್ದಾರೆ. ಮಂಟೇಸ್ವಾಮಿ ಕಾವ್ಯದಲ್ಲಿ ರಾಚಪ್ಪಾಜಿಯ ಮಹಿಮೆ ಕೈಗೊಂಡ ಸಾಹಸಗಳು, ಪವಾಡಗಳು ಸುದೀರ್ಘವಾಗಿ ವರ್ಣಿತವಾಗಿದೆ. ಈ ವೃತ್ತಿಗಾಯಕನ ಕಲೆಯನ್ನು ಮಂಟೇಸ್ವಾಮಿ ಶಿಷ್ಯಪರಂಪರೆ ಅಂದಿನಿಂದ ಇಂದಿನವರೆಗೂ ಮುಂದುವರೆಸಿಕೊಂಡು ಬಂದಿದೆ. ಇವರನ್ನು 'ನೀಲಗಾರರು' ಎಂದು ಕರೆಯಲಾಗುತ್ತದೆ.

ನೀಲಗಾರರು ಎಂದರೆ 'ಲೀಲೆಗಾರರು' ಎಂದು ಕೆಲವರು ಅರ್ಥೈಸಿದ್ದಾರೆ. ಆದರೆ ನೀಲ ಪದ ಬಹುಶಃ 'ಮತ್ತು' ತರಿಸುವ ಕ್ರಿಯೆಗೆ ಸಂಬಂಧಿಸಿದ್ದರಬಹುದು. ಹಾವಿನ ಹೆಡೆಯ ಆಕಾರದ ತಂಬೂರಿ, ತಾಳ, ದಮ್ಮಡಿ, ಗಗ್ಗರ ಇವರ ಸಾತಿಗಳು. ಮುಖ್ಯ ಗಾಯಕನ ಸೊಲ್ಲಿಗೆ ಸ್ವರ ಕೊಡುವುದು, ಹೂಗುಟ್ಟುವುದು ಪ್ರತಿಕ್ರಿಯಿಸುವುದು ಹಾಗೂ ಇತರೆ ತಾಳಗಳನ್ನು ಬಳಸುವುದು ಸಹ ಗಾಯಕರ ಕೆಲಸ, ಇವರು ಮಂಟೇಸ್ವಾಮಿ ಕಾವ್ಯದ ಜೊತೆಗೆ ಮಾದೇಶ್ವರನ ಕಾವ್ಯವನ್ನು ಹಾಡುತ್ತಾರೆ."

'ಪದವ ಹೇಳೋ ನಾಲಿಗೆಗೆ ಒಲಿದು ಬಾಪ್ಪ......' ಎಂದು ನೀಲಗಾರರು ಕಥಾಲೋಕವನ್ನು ಪ್ರವೇಶಿಸುವ ಮೊದಲು ಸ್ತುತಿ ಮಾಡುತ್ತಾರೆ ಅನಕ್ಷರಸ್ಥರಾದವರ ಸ್ಮೃತಿ ಮತ್ತು ನಾಲಿಗೆಗೆ ಧರ್ಮಗುರುಗಳು ಒಲಿದು ವಾಲಾಡುತ್ತಾರೆ, ತಂಬೂರಿ ಮೀಟಿ ಗಗ್ಗರಗಳನ್ನು ಜಲೀಲ್ ಎಂದರೆ ಕಥೆ ಮೂರು ರಾತ್ರಿಗಳ ತನಕ ಸುಲಲಿತವಾಗಿ ಹರಿಯುವ ಶಕ್ತಿ ಪಡೆದಿದೆ. ಆದರೆ ಒಕ್ಕಲಿನವರು ಆ ಕಾವ್ಯವನ್ನು ತಾಳಿಂದ ತುದಿಯವರೆಗೆ ಹಾಡಿಸುವ ಪರಿಪಾಠವಿಲ್ಲ ಪ್ರಸಂಗಗಳೋಪಾದಿಯಲ್ಲಿ ಈ ಕಥೆಯನ್ನು ಕೇಳುತ್ತಾರೆ.

ಹೊಸ ಮನೆಗೆ ಹೋಗುವಾಗ ಸತ್ತು ಕೆಟ್ಟವರಿಗೆ ಅನ್ನ ಹಾಕುವಾಗ ಒಕ್ಕಲಿನವರು ನೀಲಗಾರರನ್ನು ಕರೆಸಿ ಈ ಕಥೆ ಹಾಡಿಸುತ್ತಾರೆ. ಒಕ್ಕಲಿನವರು ಇಷ್ಟಪಟ್ಟ ಕಥಾ ಭಾಗವನ್ನು ನೀಲಗಾರರು ಹಾಡಿದರು ಆಯಾಯ ಪ್ರಸಂಗಗಳಿಗೆ

ತಾಳು ತುದಿಯನ್ನು ಎಟುಕಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ, ಕಥೆಯನ್ನು ಆದಿಯಿಂದ ಹಾಡಿ ಅಂತ್ಯದವರೆಗೆ ಮುಗಿಯುವ ಪರಿಪಾಟ ಸಾಮಾನ್ಯವಾಗಿ ಕಂಡು ಬಂದಿಲ್ಲ. ಈ ಕಥೆಗೆ ಆದಿ ಅಂತ್ಯಗಳಿವೆ ಎಂದು ಅವರು ನಂಬುವುದಿಲ್ಲ. ಪ್ರತಿಯೊಂದು ಪ್ರಸಂಗವನ್ನು ಅಖಂಡವಾಗಿ ಕಟ್ಟುತ್ತಾರೆ.

'ನೀಲಗಾರರು ಒಟ್ಟು ಕಥೆಗೆ ಕಾವ್ಯ, ಪದ್ಯ, ವಚನವೆಂದು ಕರೆಯುವುದಿಲ್ಲ ಧರೆಗೆ ದೊಡ್ಡವರ ಕಥೆ ಮಂಟೇಸ್ವಾಮಿ ಕಥೆ ಸಿದ್ದಪ್ಪಾಜಿ ಕಥೆ ಎಂದು ಕರೆಯುತ್ತಾರೆ. ಮಂಟೇಸ್ವಾಮಿಯವರ ಒಕ್ಕಲಿನಲ್ಲಿ ಹರಿಜನ, ಉಪ್ಪಾರ, ಗಂಟಕಾರ, ಗೌಡ, ಮಡಿವಾಳ, ಕುರುಬ, ಕುಂಬಾರ, ಆಚಾರಿ ಲಿಂಗಾಯಿತ, ಅರಸು ಜಾತಿಯವರು ಇದ್ದಾರೆ. ಆದರೆ ಈ ಕಥೆಯನ್ನು ಕಟ್ಟಿ ಹಾಡುವವರು ಸಾಮಾಜಿಕವಾಗಿ ಹಿಂದುಳಿದವರಾದ ಹರಿಜನರು, ಉಪ್ಪಾರರು, ಮಡಿವಾಳರು, ಕುಂಬಾರರು ಮಾತ್ರ ಉಳಿದ ಒಕ್ಕಲಿನವರು ಹಬ್ಬ ಹರಿದಿನಗಳಲ್ಲಿ ಸತ್ತು ಕೆಟ್ಟವರಿಗೆ ದಿನಗಳಲ್ಲಿ ಈ ನೀಲಗಾರರನ್ನು ಕರೆಸಿಕೊಂಡು ಹಾಡು ಹೇಳಿಸುತ್ತಾರೆ.

ಸಾಮಾಜಿಕವಾಗಿ ಯಾವುದೇ ಅಂತಸ್ತುಗಳಿಲ್ಲದ ಜನವರ್ಗ ಕಟ್ಟಿರುವ ಈ ಕಥೆಯನ್ನು ಒಕ್ಕಲಿನ ಎಲ್ಲಾ ಜಾತಿಯವರು ಅಪಾರವಾದ ಭಕ್ತಿ ಗೌರವಗಳಿಂದ ಕೇಳುತ್ತಾರೆ. ಮೇಲು ಜಾತಿಯವರ ಅಂತಸ್ತು ಸಿರಿತನ ಜಾತೀಯತೆಯನ್ನೆಲ್ಲಾ ಒಂದಾಗಿಸಿ ಬಿಡುವ ಕಲೆಗಾರಿಕೆ ಈ ಪರಂಪರೆಯ ಹಾಡುಗಾರರಿಗೆ ಇದೆ."

ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಹೆಚ್ಚು ಒಕ್ಕಲಿರುವುದರಿಂದ ಈ ಎರಡು ಜಿಲ್ಲೆಗಳಲ್ಲಿ ಹೆಚ್ಚು ಕಥೆ ಹಾಡುವ ನೀಲಗಾರರಿದ್ದಾರೆ. ಈ ಎರಡು ಸೀಮೆಗಳಲ್ಲಿ ಎರಡು ಗುರು ಪರಂಪರೆಗಳಿರುವುದು ಸ್ಪಷ್ಟ ಗೋಚರಿಸುತ್ತದೆ. ಮಂಡ್ಯ ಜಿಲ್ಲೆಯ ನೀಲಗಾರ ಮೇಳದವರು ತಂಬೂರಿ, ಗಗ್ಗರ, ಢಕ್ಕೆಗಳನ್ನು ಪ್ರಧಾನವಾಗಿ ಮೇಳದಲ್ಲಿ ಬಳಸುತ್ತಾರೆ.

ಮೈಸೂರು ಜಿಲ್ಲೆಯವರು ತಂಬೂರಿ, ಗಗ್ಗರ, ದಮ್ಮಡಿಯನ್ನು ಬಳಸುತ್ತಾರೆ. ಮಂಡ್ಯ ಜಿಲ್ಲೆಯವರು ಮೇಳೆ, ನಾದಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುವುದರಿಂದ ವಾದ್ಯ ಪರಿಕರಗಳನ್ನು ಹೆಚ್ಚು ಬಳಸುತ್ತಾರೆ. ಮೈಸೂರು ಜಿಲ್ಲೆಯವರು ಕಥೆಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟು ಹಾಡುತ್ತಾರೆ. ಕಪ್ಪಡಿ ಜಾತ್ತರೆಯ ಸಮಯದಲ್ಲಿ ಇವರು ಇಲ್ಲೇ ಜಾತ್ರೆ ಮುಗಿಯುವ ತನಕ ಇರುತ್ತಾರೆ. ರಾತ್ರಿ ಹೊತ್ತು ಹಾಡುತ್ತ ಕುಳಿತರೆ ಅಲ್ಲಿಂದ ಭಕ್ತಾದಿಗಳು ಕೂತು ರಾಚಪ್ಪಾಜಿಯ ಕಥೆಯನ್ನು ಕೇಳುತ್ತಾರೆ. ಇಲ್ಲಿ ಬರುವ ನೀಲಗಾರರು ಕೆಲವರು ವೃತ್ತಿಪರ ಗಾಯಕರಾಗಿದ್ದಾರೆ. ಕೆಲವರು ಭಕ್ತಿಯಿಂದ ರಾಚಪ್ಪಾಜಿ ಸನ್ನಿಧಿಯಲ್ಲಿ ಹಾಡುತ್ತಾರೆ ಆ ಹಾಡಿನ ಮಾದರಿಯೊಂದನ್ನು ಆಂಶಿಕವಾಗಿ ಈ ಕೆಳಗೆ ಕೊಡಲಾಗಿದೆ.

"ಗುರುವೇ ಸಿದ್ದು ಸಿದ್ದರುಗೆಲ್ಲಾ
ನೀವು ಅತಿ ಮಲುದ್ದು ಘನ ನೀಲಿ
ಸಿದ್ಧಯ್ಯ ಸ್ವಾಮಿ ಬನ್ನಿ
ಮಂಟೇದಾ
ಲಿಂಗಯ್ಯ ನೀವೇ ಬನ್ನಿ

ನನ್ನ ಪಾತಾಳ ಜ್ಯೋತಿ ಬಪ್ಪಾ
ನನ್ನ ಪರಂಜ್ಯೋತಿ ಎದ್ದು ಬನ್ನಿ
ಸಿದ್ಧಯ್ಯ ಸ್ವಾಮಿ ಬನ್ನಿ
ಮಂಟೇದಾ ಲಿಂಗಯ್ಯ ನೀವೇ ಬನ್ನಿ

ಮಗ್ಗ ಮರಳಿ
ಹೆಗ್ಗಡದೇವನಕೋಟೆ

ಪಟ್ಣ ಪಾಲಹಳ್ಳಿ
ಸಂತೇ ಸರಗೂರು
ಅರಕೆರೆ ಬನ್ನೂರು
ತಂತ್ರಳ ರಾಜ್ಯ
ಬಕ್ಲ ಮೂಡಾ ಎಲ್ಲೆ
ಹಂಪಾಪುರದ ಗ್ರಾಮ
ಎಡತೊರೆ ಗ್ರಾಮ
ಚಂದಗಾಲದ ತೋಟ
ಚುಂಚನಕಟ್ಟೆ ತಾಲ್ಲೂಕು
ಮೈಸೂರು ದತರ ಲಟ್ಟೆ
ನಿನ್ನ ಒಕ್ಕಳು ಮೂಡದಾ ಎಲ್ಲೆ
ಕಪ್ಪಡಿ ಕೈಲಾಸ ಅಂತ
ನಾಮಕರಣ ಮಾಡುತೀನಿ

ಸಿದ್ಧಯ್ಯಸ್ವಾಮಿ ಬನ್ನಿ
ಮಂಟೇದ ಲಿಂಗಯ್ಯ ಬನ್ನಿ॥

**ಉಪಸಂಹಾರ:**

ಕೃಷ್ಣರಾಜನಗರ ತಾಲ್ಲೂಕಿನ ಪುಣ್ಯಕ್ಷೇತ್ರಗಳಲ್ಲೆ ಮಕುಟಪ್ರಾಯವಾಗಿರುವ ಕಪ್ಪಡಿ ಕ್ಷೇತ್ರವು ಹಲವಾರು ಭಕ್ತ ಸಮೂಹವನ್ನು ಹೊಂದಿದೆ. ಮಾನವನು ಆಧುನಿಕತೆಯತ್ತ ಹೆಜ್ಜೆ ಇಡುತ್ತಿದ್ದರೂ ಇನ್ನು ಧರ್ಮ, ದೇವರು, ಆಚರಣೆ, ಸಂಪ್ರದಾಯ ಇತ್ಯಾದಿ ನಂಬಿಕೆಗಳು ಆತನ ಮನಸ್ಸಿನಲ್ಲಿ ಜೀವಂತವಾಗಿವೆ ಎಂಬುದಕ್ಕೆ ಕಪ್ಪಡಿ ಕ್ಷೇತ್ರಕ್ಕೆ ಬರುವ ಹಲವಾರು ಭಕ್ತರುಗಳು ನಿದರ್ಶನವಾಗಿದ್ದಾರೆ. ಇಲ್ಲಿ ಬರುವ ಮಂಟೇಸ್ವಾಮಿ ಪರಂಪರೆಯ ರಾಚಪ್ಪಾಜಿ ಕೇವಲ ಧಾರ್ಮಿಕ ವ್ಯಕ್ತಿಯಾಗಿರದೆ ಸಾಂಸ್ಕೃತಿಕ ವ್ಯಕ್ತಿಯಾಗಿದ್ದಾರೆ. ಅವರ ಬದುಕು ಕೂಡ ಒಬ್ಬ ಸಾಂಸ್ಕೃತಿಕ ನಾಯಕನ ಹಾಗೆಯೇ ಇದೆ.

ಕಪ್ಪಡಿ ಕ್ಷೇತ್ರದಲ್ಲಿನ ಮತ್ತೊಂದು ವಿಶೇಷತೆ ಎಂದರೆ 'ಸಮಾಧಿಯಾರಾಧನೆ ಪರಂಪರೆ' ಸಾಮಾನ್ಯವಾಗಿ ದೇವಸ್ಥಾನಗಳಲ್ಲಿ ದೇವತೆ ಆರಾಧನೆಯೇ ಹೆಚ್ಚು ನಮ್ಮ ಕರ್ನಾಟಕದ ಉದ್ದಗಲಕ್ಕೂ ಹಲವಾರು ದೇವಾಲಯಗಳಿವೆ. ಆ ದೇವಾಲಯಗಳಲ್ಲಿ ಹಲವಾರು ದೇವತೆಗಳಿವೆ. ಆದರೆ ಕಪ್ಪಡಿಯಲ್ಲಿ ನಮ್ಮ ನಡುವೆ ಬಾಳಿ ಬದುಕಿದಂತಹ

ಸಿದ್ಧ ಪುರುಷರು, ಯೋಗಿಗಳು ತಮ್ಮ ಆತ್ಮಕಲ್ಯಾಣಕ್ಕಾಗಿ ಹಾಗೂ ಲೋಕಕಲ್ಯಾಣಕ್ಕಾಗಿ ದುಡಿದವರನ್ನು ಅವರು ತೀರಿ ಹೋದನಂತರ ಅವರ ಸಮಾಧಿಯನ್ನು ಉಪಾಸನೆ ಮಾಡುವುದನ್ನು ವೀರಶೈವರಲ್ಲಿ ಕಾಣುತ್ತೇವೆ. ಅಲ್ಲೆ ಅವರಿನ್ನು ಜೀವಂತವಾಗಿದ್ದಾರೆ. ಅಲ್ಲಿ ಒಂದು ವಿಶೇಷ ಶಕ್ತಿ ಇದೆ ಎಂದು ನಂಬಿ ಪೂಜಿಸುತ್ತಾರೆ. ಅದೇ ರೀತಿ ಕಪ್ಪಡಿಯಲ್ಲಿ ಸಮಾಧಿಯಾರಾಧನೆ ಪರಂಪರೆಯಿದ್ದು ರಾಚಪ್ಪಾಜಿ ಮತ್ತು ಚೆನ್ನಾಜಮ್ಮನವರು ಜೀವಂತವಾಗಿ ಐಕ್ಯವಾಗಿರುವುದರಿಂದ ಅವರಿನ್ನು ಅಲ್ಲೆ ನೆಲೆಸಿರುವ ಭಾವನೆ ಬೆಳೆದು ಪೂಜಿಸುತ್ತ ಬಂದಿದ್ದಾರೆ.

ಕಪ್ಪಡಿ ಕ್ಷೇತ್ರ ಧಾರ್ಮಿಕ ಸೌಹಾರ್ದತೆಯನ್ನು ಪ್ರತಿಬಿಂಬಿಸುತ್ತದೆ. ಇಲ್ಲಿಗೆ ಮುಸ್ಲಿಮರು ಬಂದು ರಾಚಾಪ್ಪಾಜಿಯ ಗದ್ದುಗೆಯ ಮುಂದೆ ನಮಾಜ್ ಮಾಡುವುದನ್ನು ವೀಕ್ಷಿಸಿದರೆ ಹಿಂದೂ ಮುಸ್ಲಿಮರ ನಡುವೆ ಇರುವ ಸೌಹಾರ್ದ ಸಂಬಂಧದ ಅರಿವಾಗುತ್ತದೆ. ಹಾಗೆಯೇ ಸುತ್ತಮುತ್ತಲಿನ ಹಳ್ಳಿಗರು ಹಾಗೂ ನಾನಾ ಕಡೆಯಿಂದ ಬಂದ ಜನರುಗಳ ನಡುವೆ ಸಂಪರ್ಕ ಸೇತುವೆಯಾಗಿ ಕಪ್ಪಡಿಜಾತ್ರೆ ನಿರ್ವಹಿಸುತ್ತದೆ. ಇದು ಹಳ್ಳಿಗರ ಬದುಕಿಗೆ ಚೈತನ್ಯದಾಯಕ ಶಕ್ತಿಯಾಗಿದೆ.

ಕಪ್ಪಡಿ ಜಾತ್ರೆ ಹಲವಾರು ಧರ್ಮ, ಸಾಹಿತ್ಯ, ಕಲೆ ಇವೆಲ್ಲವು ಒಂದರೊಡನೊಂದು ಮೇಳವಿಸಿ ಒಂದು ಸಾಂಸ್ಕೃತಿಕವಾದ ಪರಿವೇಷವನ್ನು ತಂದುಕೊಟ್ಟಿದೆ. ಈ ಜಾತ್ರೆ ನಡೆಯುವ ಒಂದು ತಿಂಗಳ ಅವಧಿಯಲ್ಲಿ ಇಲ್ಲಿಗೆ ಬರುವ ಜನಪದ ಮೇಳಗಳು ಹಾಗೂ ನೀಲಗಾರರು ಹಾಡುವ ಹಾಡುಗಳು ಜನಪದ ಸಾಹಿತ್ಯವನ್ನು ಉಳಿಸಿಕೊಂಡು ಬರುವಲ್ಲಿ ತಮ್ಮದೇ ಆದ ಪಾತ್ರ ವಹಿಸಿಕೊಂಡು ಬಂದಿವೆ.

ಒಟ್ಟಾರೆ ಭಾರತ ಹಳ್ಳಿಗಳ ದೇಶವಾದ್ದರಿಂದ ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದೊಂದು ವಿಶಿಷ್ಟತೆ ಇದ್ದೆ ಇರುತ್ತದೆ. ಈ ಹಳ್ಳಿಗಳಲ್ಲಿರುವ ಸಂಪ್ರದಾಯ ಆಚರಣೆಗಳ ನಂಬಿಕೆಗಳ ಒಟ್ಟು ಮೊತ್ತವನ್ನು ನಾವು ಭಾರತೀಯ ಸಂಸ್ಕೃತಿ ಎಂದು ಕರೆಯುತ್ತೇವೆ. ಒಂದು ಕಾಲದಲ್ಲಿ ಜಾನಪದ ಕ್ಷೇತ್ರಕಾರ್ಯ ಪ್ರಮುಖ ಕ್ಷೇತ್ರಗಳಾದ ಕಾಶಿ, ರಾಮೇಶ್ವರ, ತಲಕಾಡು ಮುಂತಾದ ಪ್ರಸದ್ಧಿ ಪಡೆದಿರುವ ಸ್ಥಳಗಳ ಕುರಿತು ಸಂಶೋಧನೆ ನಡೆಯುತ್ತಿತ್ತು. ಆದರೆ ಇತ್ತೀಚೆಗೆ ತಲಕಾಡು ಮುಂತಾದ ಪ್ರಸಿದ್ಧಿ ಪಡೆದಿರುವ ಸ್ಥಳಗಳ ಕುರಿತು ಸಂಶೋಧನೆ ನಡೆಯುತ್ತಿತ್ತು. ಆದರೆ ಇತ್ತೀಚೆಗೆ ಜಾನಪದ ಸಂಶೋಧನೆ ಹಳ್ಳಿಹಳ್ಳಿಗಳಲ್ಲೂ ನಡೆಯುತ್ತಿರುವುದು ಅಲ್ಲಿನ ವಿಶಿಷ್ಟತೆಯನ್ನು

ಬಯಲಿಗೆಳೆಯುತ್ತಿರುವುದು ಸಂತೋಷದಾಯಕವಾದ ವಿಚಾರ, ಇನ್ನೂ ಕಪ್ಪಡಿಯಂತಹ ಎಷ್ಟೋ ಕ್ಷೇತ್ರಗಳಲ್ಲಿ ಜಾನಪದ ಸಂಶೋಧನೆ ನಡೆದಿಲ್ಲ. ಅಲ್ಲೆಲ್ಲಾ ಕ್ಷೇತ್ರಕಾರ್ಯ ಮಾಡಿ ಅಲ್ಲಿನ ವಿಶಿಷ್ಟತೆಯನ್ನು ಎತ್ತಿತೋರಿಸಿ ಭಾರತೀಯ ಸಂಸ್ಕೃತಿಯ ಮಡಿಲನ್ನು ಇನ್ನು ತುಂಬಿಸಬೇಕು. ಈ ರೀತಿ ಮಾಡಿದರೆ ಕರ್ನಾಟಕ ಹಾಗೂ ಭಾರತೀಯ ಸಂಸ್ಕೃತಿಗೆ ಒಳ್ಳೆಯ ಮಾದರಿಯಾಗುತ್ತದೆ ಎಂಬ ನಂಬಿಕೆ ನನ್ನದು.



ಕಪ್ಪಡಿ ದೇವಾಲಯದ ಪ್ರಾಂಗಣದ ದೃಶ್ಯ



ಕಿಡಿಗಣ್ಣ ಶ್ರೀ ರಾಚಪ್ಪಾಜಿ ಗದ್ದುಗೆ



ಶ್ರೀ ಚೆನ್ನಾಬಮ್ಮ ಗದ್ದಿಗೆ



ಕಪ್ಪಡಿ ಜಾತ್ರೆಯಲ್ಲಿ ನೆರೆದಿರುವ ಜನಸ್ತೋಮ

# ಅಧ್ಯಾಯ – ೬

## ಚುಂಚನಕಟ್ಟೆ ಶ್ರೀರಾಮ ಜಾತ್ರಾ ಮಹೋತ್ಸವ

**ಚುಂ**ಚನಕಟ್ಟೆಯ ಹೆಸರು ಕೇಳಿದೊಡನೆ ನಮಗೆ ಆ ಸುಂದರ ತಾಣದಲ್ಲಿ ನಡೆಯುವ ಜಾತ್ರಾ ಮಹೋತ್ಸವದ ಚಿತ್ರಣ ಕಣ್ಣಮುಂದೆ ಬಂದು ನಿಲ್ಲುತ್ತದೆ. ಏಕೆಂದರೆ ಈ ಜಾತ್ರೆಯೂ ರಾಜ್ಯದಲ್ಲಿ ನಡೆಯುವ ಜಾತ್ರೆಗಳಲ್ಲೆಲ್ಲಾ ಪ್ರಮುಖವಾದ ಹಾಗೂ ವಿಶಿಷ್ಟವಾದ ಸ್ಥಾನವುಳ್ಳದ್ದಾಗಿದೆ. ಅಲ್ಲದೆ, ಆ ಜಾತ್ರೆಯ ವೈಶಿಷ್ಟ್ಯಗಳು ಜನರ ಆಕರ್ಷಣೆಗಳಲ್ಲಿ ಪ್ರಮುಖವಾದವುಗಳಾಗಿವೆ.

ರಾಜ್ಯದ ಪ್ರಮುಖ ಯಾತ್ರಾಸ್ಥಳಗಳಲ್ಲಿ ಒಂದಾದ ಚುಂಚನಕಟ್ಟೆಯ ಜಾತ್ರೆಯೂ ಪ್ರಮುಖವಾದುದಾಗಿದೆ. ಆ ಜಾತ್ರೆಯ ಬಗ್ಗೆ ಕೆಲವು ಅಂಶಗಳನ್ನು ಮತ್ತು ಆ ಜಾತ್ರೆಯಲ್ಲಿ ನಡೆಯುವ ವಿಧಿವಿಧಾನಗಳನ್ನು ಈ ಅಧ್ಯಾಯದಲ್ಲಿ ನೋಡಬಹುದು.

ಸಾಮಾನ್ಯವಾಗಿ ದೇವಾಲಯಗಳ ಇತಿಹಾಸದೊಡನೆ ಜಾತ್ರೆಗಳ ಇತಿಹಾಸವನ್ನು ಗಂಟುಹಾಕುವುದುಂಟು, ವೇದಗಳ ಕಾಲದಲ್ಲಿ ದೇವಾಲಯಗಳಿರಲಿಲ್ಲವೆಂದು ದಾಖಲಾಗಿದ್ದರೂ, ದೇವಾಲಯಗಳಿರಲಿಲ್ಲವೆಂದೂ, ಜಾತ್ರೆಗಳಿರಲಿಲ್ಲವೆಂದು ಹೇಳುವುದು ಕಷ್ಟ. ಮಾರಿ ಮಸಣಿಯರು ಮುಂತಾದ ಗ್ರಾಮದೇವತೆಗಳಿಗೆ ಸಾಮಾನ್ಯವಾಗಿ ಗುಡಿಕಟ್ಟುತ್ತಿರಲಿಲ್ಲ. ಗುಡಿಗಳಿದ್ದರೂ ಅವು ಈಚಿನವುಗಳಾಗಿವೆ. ವೇದ ಪೂರ್ವಕಾಲದಿಂದಲೂ ಅವುಗಳ ಪೂಜೆಯ ಜತೆಜತೆಗೆ ಅವುಗಳಿಗೆ ಸಂಬಂಧಿಸಿದ ಜಾತ್ರೆಗಳೂ ಅವಿರತವಾಗಿ ನಡೆಯುತ್ತಿದ್ದಿರಬೇಕು. ಆದ್ದರಿಂದ ಜಾತ್ರೆಗಳು ಮೊದಮೊದಲು ಗ್ರಾಮದೇವತೆಗಳ ಸುತ್ತ ಹೆಣೆದುಕೊಂಡಿದ್ದು, ಕೊನೆಕೊನೆಗೆ ನಗರ ದೇವತೆಗಳ ಕಕ್ಷೆಯೊಳಗೂ ವ್ಯಾಪಿಸಿಕೊಂಡಿರಬಹುದೆಂದು ತೋರುತ್ತದೆ.

ಸಾಮಾನ್ಯವಾಗಿ ಎಲ್ಲಾ ಜಾತ್ರೆಗಳು ಯಾವುದಾದರೊಂದು ದೇವರ ಹೆಸರಿನಲ್ಲಿ ಅಥವಾ ಊರಿನ ಆಶ್ರಯದಲ್ಲಿ ನಡೆಯುತ್ತವೆ ಎಂಬುದನ್ನು ತಿಳಿದಿದ್ದೇವೆ. ಹಾಗೆಯೇ ಚುಂಚನಕಟ್ಟೆಯ ಜಾತ್ರೆ ಶ್ರೀರಾಮನ ಹೆಸರಿನಲ್ಲಿ ನಡೆಯುತ್ತದೆ. ಶ್ರೀರಾಮ ದೇವಾಲಯದ ಬಗ್ಗೆ ಹಿಂದೆ ತಿಳಿಸಿದಂತೆ ಹಲವು ಐತಿಹ್ಯಗಳೂ, ಪುರಾಣಗಳೂ, ಜನರ ನಂಬಿಕೆಯಲ್ಲಿವೆ. ಅಂತೆಯೇ ಇಲ್ಲಿ ನಡೆಯುವ ಜಾತ್ರೆಗೂ ತನ್ನದೇ ಆದ ಇತಿಹಾಸವಿದೆಯಾದರೂ ಅದಕ್ಕೆ ನಿರ್ದಿಷ್ಟವಾದ ನಂಬಲಾರ್ಹವಾದ ಆಧಾರಗಳಿಲ್ಲ. ಹಾಗಾಗಿ ಈಗ ತಿಳಿದಿರುವ ಮೆಟ್ಟಿಗೆ ಮೈಸೂರು ಅರಸರಾದ ಚಿಕ್ಕದೇವರಾಜ ಒಡೆಯರ ಆಳ್ವಿಕೆಯ ಕಾಲದಲ್ಲಿ ಜಾತ್ರೆ ಆರಂಭವಾಗಿರಬಹುದೆಂದು ಊಹಿಸಬಹುದು.

ಕೃಷ್ಣರಾಜನಗರದಿಂದ ಸುಮಾರು ೧೨ ಕಿ.ಮೀ. ಅಂತರದಲ್ಲಿರುವ ಚುಂಚನಕಟ್ಟೆಯು ಕಾವೇರಿ ತೀರದಲ್ಲಿನ ಶ್ರೀರಾಮ ದೇವರ ಹೆಸರಿನಲ್ಲಿ ಈ ಜಾತ್ರೆ ನಡೆಯುತ್ತದೆ. ಚುಂಚನಕಟ್ಟೆಯ ಸುತ್ತಲೂ ಹಸಿರಿನಿಂದ ಕಂಗೊಳಿಸುವ ತೆಂಗು, ಬಾಳೆ, ತೋಟಗಳು, ಕಬ್ಬಿನ ಗದ್ದೆ ಒಂದು ಕಡೆಯಿದ್ದರೆ ಕಾವೇರಿ ಹೊಳೆಯ ಸುಂದರ ನೋಟ ಮತ್ತೊಂದು ಕಡೆಗಿದೆ. ಅಲ್ಲದೆ ಸುತ್ತಲೂ ಸುಂದರವಾದ ಗಿಡಮರಗಳಿಂದ ಕೂಡಿದ ಶಾಂತ ವಾತಾವರಣವಿದ್ದು, ಪ್ರಕೃತಿ ಸೌಂದರ್ಯಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ಪ್ರಕೃತಿ ಸೌಂದರ್ಯದ ನೆಲೆಯಾಗಿರುವಂತೆ ಕಲೆಯ ಬಲೆಯೂ ಈ ಸ್ಥಳದಲ್ಲಿ ಹರಡಿಕೊಂಡಿದೆ. ಇಂತಹ ವೈಭವೋಪೇತವಾದ ನೆಲದಲ್ಲಿ ವರ್ಷಕ್ಕೊಮ್ಮೆ ನಡೆಯುವ ಶ್ರೀರಾಮ ಜಾತ್ರೆಯೂ ಸುತ್ತಮುತ್ತಲ ಪ್ರದೇಶದ ಜನರಿಗೊಂದು ವಿಶಿಷ್ಟವಾದ ಹಬ್ಬವೂ ಆಗಿದೆ.

ವರ್ಷದ ಪ್ರತಿ ಜನವರಿ ತಿಂಗಳಲ್ಲಿ ಹನ್ನೆರಡು ದಿನಗಳು ಕಾಲ ನಡೆಯುವ ಅದ್ದೂರಿ ಜಾತ್ರೆ ಇದಾಗಿದೆ. ಈ ಜಾತ್ರೆಯು ರಥೋತ್ಸವದ ೭ ದಿನಗಳ ಮುಂಚೆ ಆರಂಭವಾಗುತ್ತದೆ. ಈ ಜಾತ್ರೆಯೂ ಚುಂಚನಕಟ್ಟೆಯು ಸೇರಿದಂತೆ ಸುತ್ತಮುತ್ತಲ ಗ್ರಾಮಗಳ ಜನರ ಸಹಕಾರದೊಂದಿಗೆ ನಡೆಯುತ್ತದೆ. ಅಲ್ಲದೆ ತಾಲ್ಲೂಕಿನ ತಹಸೀಲ್ದಾರ್‌ರವರು ನೇತೃತ್ವವನ್ನು ಹೊಂದಿದ ಧರ್ಮದರ್ಶಿ ಮಂಡಲಿಯು ಇದರ ಎಲ್ಲಾ ಜವಾಬ್ದಾರಿಯನ್ನು ನಿಭಾಯಿಸುತ್ತದೆ. ಈ ಜಾತ್ರೆಯೂ ದನಗಳ ಜಾತ್ರೆಯಾಗಿದ್ದು ಕರ್ನಾಟಕದಲ್ಲಿ ನಡೆಯುವ ದನಗಳ ಜಾತ್ರೆಗಳಲ್ಲಿ ಎರಡನೇ ಸ್ಥಾನವನ್ನು ಇದು ಪಡೆದುಕೊಂಡಿದೆ. ಈ ಸಂದರ್ಭದಲ್ಲಿ ನಡೆಯುವ ದನಗಳ ಜಾತ್ರೆಗಳಲ್ಲಿ ಎರಡನೇ ಸ್ಥನವನ್ನು ಇದು ಪಡೆದುಕೊಂಡಿದೆ. ಈ ಸಂದರ್ಭದಲ್ಲಿ ಸೇರುವ ದನಗಳ ಪರಿಷೆಗೆ ನೂರಾರು ಮೈಲಿಗಳಿಂದ ದನಗಳು ಬರುತ್ತವೆ. 'ಹಳ್ಳಿಕಾರು' ಜಾತಿಯ ಹೋರಿಗಳಿಗೆ ಈ ಜಾತ್ರೆ ಪ್ರಸಿದ್ಧವಾಗಿದೆ. ಈ ಜಾತ್ರೆಗೆ ಸುಮಾರು ಎರಡು ಲಕ್ಷ ಜನರು ಸೇರುತ್ತಾರೆ.

**ಸ್ಥಳನಾಮ:** ನಾವು ಯಾವುದೇ ಒಂದು ನಿರ್ದಿಷ್ಟ ಊರಿನ ಹೆಸರಿನ ಬಗ್ಗೆ ಕೆದಕಿದಾಗ ಆ ಹೆಸರು ಬರಲು ಕಾರಣಗಳು ಅಂದರೆ ಪುರಾಣ ಕಥೆ, ರಾಜಕೀಯ ಕಾರಣ, ಸಾಂಸ್ಕೃತಿಕ ಕಾರಣ ಅಥವಾ ಯಾವುದಾದರೂ ಒಬ್ಬ ವ್ಯಕ್ತಿಯ ಕಥೆಗಳು ಬಳಕೆಯಲ್ಲಿದ್ದು, ಆ ಕಾರಣದಿಂದ ಊರಿಗೆ ಆ ಹೆಸರು ಬಂತು ಎಂಬ ಹೇಳಿಕೆಗಳು ಸಾಮಾನ್ಯವಾಗಿರುತ್ತವೆ.

ಕೃಷ್ಣರಾಜನಗರದಿಂದ ೧೨ ಕಿ.ಮೀ. ದೂರದಲ್ಲಿರುವ ಪುರಾಣ ಪ್ರಸಿದ್ಧ ಪ್ರದೇಶವಾದ 'ಚುಂಚನಕಟ್ಟೆ'ಯು ಕಾವೇರಿ ನದಿಯ ದಂಡೆಯಲ್ಲಿರುವ ಪ್ರಮುಖ ಗ್ರಾಮಾಂತರ ಪ್ರದೇಶವಾಗಿದೆ.

ಚುಂಚನಕಟ್ಟೆಯೆಂಬ ಹೆಸರು ಬರಲು ಕಾರಣವೇನೆಂದರೆ 'ಚುಂಚ' ಮತ್ತು 'ಚುಂಚಿ' ಎಂಬ ಗಂಡಹೆಂಡತಿಯರು ದಂಡಕಾರಣ್ಯದಲ್ಲಿ ಬೇಟೆಮಾಡಿಕೊಂಡು ಜೀವನ ಸಾಗಿಸುತ್ತಿದ್ದರು. ತೃಣಬಿಂದು ಮಹಾಮುನಿ ಎಂಬುವವನು ಅದೇ ಅರಣ್ಯದಲ್ಲಿ ಯುಗಯುಗಗಳಿಂದ ತಪಸ್ಸು ಆಚರಿಸುತ್ತಾ ಕಾಲಕಳೆಯುತ್ತಿದ್ದನು. ಬೇಟೆಯಲ್ಲಿ ನಿರತರಾಗಿದ್ದ ಚುಂಚ ಚುಂಚಿ ಮತ್ತು ಅವರ ಬೇಡರ ತಂಡ ಆ ಮುನಿಯನ್ನು ಕಂಡು ಅವರ ಮೋಹಕ್ಕೆ ಒಳಗಾಗಿ ಬೇಟೆಯಾಡುವುದನ್ನೇ ನಿಲ್ಲಿಸಿ ದೈವಭಕ್ತರಾದರು. ಅಲ್ಲದೆ ಅವರು ಆ ಋಷಿಯ ಸೇವೆಯಲ್ಲಿ ನಿರತರಾದರು.

ಇದೇ ಕಾಲದಲ್ಲಿ ವನವಾಸದಲ್ಲಿದ್ದ ಶ್ರೀರಾಮನು ದಂಡಕಾರಣ್ಯಕ್ಕೆ ಬಂದು ಅಲ್ಲಿ ತಪಸ್ಸು ಮಾಡುತ್ತಿದ್ದ ತೃಣಬಿಂದು ಮಹಾಮುನಿ ಇರುವುದನ್ನು ಅರಿತು ಅವನನ್ನು ಕಂಡು ಹರಸಿದನೆಂದು, ಆ ಮುನಿಯ ಕೃಪೆಯಿಂದ ಚುಂಚ ಚುಂಚಿಯರಿಗೂ ಶ್ರೀರಾಮನ ದರ್ಶನವಾಗಿ ಅವರು ಮೋಕ್ಷ ಹೊಂದಿದರೆಂದು ತಿಳಿದುಬರುತ್ತದೆ. ಶ್ರೀರಾಮನು ಚುಂಚನನ್ನು ಕರೆದು ಅವನನ್ನು ಹರಸಿ ಆಶೀರ್ವದಿಸಿ, 'ನೀನು ವಾಸಿಸುವ ಈ ಪ್ರದೇಶವು ಚುಂಚಾರಣ್ಯವೆಂದು ಪ್ರಸಿದ್ಧವಾಗಲಿ' ಎಂದು ವರವನ್ನು ಕೊಟ್ಟನಂತೆ, ಅಂತೆಯೇ ಅರಣ್ಯವು 'ಚುಂಚಾರಣ್ಯ'ವೆಂದು ಪ್ರಸಿದ್ಧವಾಯಿತು. ಕಾಲಕ್ರಮೇಣ ಅರಣ್ಯ ನಾಶವಾಗಿ ಪಟ್ಟಣ ತಲೆಯೆತ್ತಿತ್ತು. ಇದಲ್ಲದೆ ಈ ಅರಣ್ಯದ ಮಧ್ಯೆ ಕಾವೇರಿ ನದಿಯು ಸುಮಾರು ಇಪ್ಪತ್ತು ಅಡಿಗಳಷ್ಟು ಎತ್ತರದಿಂದ ಧುಮುಕುತ್ತಿತ್ತು. ಅದರ ರಭಸವನ್ನು ತಡೆಯುವ ಸಲುವಾಗಿ ಆ ಸ್ಥಳದಲ್ಲಿ ಬಂದು ಕಟ್ಟೆಯನ್ನು ಕಟ್ಟಲಾಯಿತು. ಹೀಗೆ ಚುಂಚಾರಣ್ಯ ಎಂಬ ಹೆಸರು ಕ್ರಮೇಣ 'ಚುಂಚನಕಟ್ಟೆ'ಯಾಗಿ ಬದಲಾಯಿತು. ಅದೇ ಪ್ರಸಿದ್ಧಿಗೆ ಬಂದು ನಿಂತಿದೆ. 'ಚುಂಚನಕಟ್ಟೆ' ಎಂಬ ಹೆಸರಲ್ಲದೆ ಈ ಊರಿಗೆ 'ದಂಡಕಾರಣ್ಯ', 'ಸೀತೆಮಡು', 'ಧನುಷ್ಕೋಟಿ' ಎಂಬ ಹೆಸರುಗಳೂ ಬಳಕೆಯಲ್ಲಿವೆ. ಈ ಹೆಸರು ಬರಲು ಕಾರಣ ಕೇಳಿದಾಗ ಪುರಾಣ ಕಥೆಗಳನ್ನು ಇಲ್ಲಿಯ ಜನ ಹೇಳುತ್ತಾರೆ. ವನವಾಸಕ್ಕೆಂದು ಬಂದ ಶ್ರೀರಾಮ, ಸೀತೆ, ಲಕ್ಷ್ಮಣರು ತೃಣಬಿಂದು ಮಹಾಮುನಿಯ ಆಶ್ರಯದಲ್ಲಿ ತಂಗಿದ್ದಾಗ, ಆ ಕಾಲ ಶ್ರಾವಣಮಾಸವಾಗಿತ್ತು. ಆ ಸಮಯದಲ್ಲಿ ಸೀತೆ ತನ್ನ ತವರಿನಲ್ಲಿ ಎಣ್ಣೆ, ಅರಿಶಿನ ಸ್ನಾನ ಮಾಡುತ್ತಿದ್ದಳು ಎಂದು ತಿಳಿದ ಆ ಮುನಿ ತನ್ನ ಆಶ್ರಮವನ್ನೇ ಸೀತೆಯ ತಂದೆ ಮನೆಯೆಂದು ತಿಳಿದುಕೊಳ್ಳುವಂತೆ ಸತ್ಕರಿಸಿ, ಅವಳು ಎಣ್ಣೆ, ಅರಿಶಿನ ಸ್ನಾನ ಮಾಡಲು ಸಿದ್ಧತೆ ನಡೆಸಿದನು. ಆದರೆ ಆಶ್ರಮದ ಪಕ್ಕದಲ್ಲೇ ಕಾವೇರಿ ನದಿ ಗುಪ್ತಗಾಮಿನಿಯಾಗಿ ಹರಿಯುತ್ತಿರುವುದನ್ನು ಅರಿತಿದ್ದ ಆ ಮುನಿ ಶ್ರೀರಾಮನಲ್ಲಿ ಪ್ರಾರ್ಥಿಸಿ ಕಾವೇರಿ ಭೂಮಿಯ ಮೇಲೆ ಹರಿಯುವಂತೆ ಮಾಡಲು ವಿನಂತಿಸಿದನು. ರಾಮನು ತನ್ನ

ಸಹೋದರ ಲಕ್ಷ್ಮಣನನ್ನು ಕರೆದು, ತನ್ನ ಬಿಲ್ಲಿನಿಂದ ಕಾವೇರಿಯನ್ನು ಭೂಮಿಯ ಮೇಲೆ ಹರಿಯುವಂತೆ ಮಾಡಲು ಆಜ್ಞಾಪಿಸಿದನು. ಆಗ ಲಕ್ಷ್ಮಣನು ಅಣ್ಣನ ಆಜ್ಞೆಯಂತೆ ಬಿಲ್ಲನ್ನು ಹೂಡಿ ಅಣ್ಣನನ್ನು ಪ್ರಾರ್ಥಿಸಿ, ಬಾಣವನ್ನು ಭೂಮಿಗೆ ಬಿಟ್ಟನು. ಆ ಬಿಲ್ಲು ಬಂಡೆಗಳನ್ನು ಇಬ್ಭಾಗ ಮಾಡಿ ಗುಪ್ತಗಾಮಿಯಾಗಿ ಹರಿಯುತ್ತಿದ್ದ ನದಿಯು ಭೂಮಿಯ ಮೇಲೆ ಹರಿಯುವಂತೆ ಮಾಡಿತು. ಲಕ್ಷ್ಮಣ ತನ್ನ ಬಾಣದಿಂದ ಕಾವೇರಿ ಭೂಮಿಮೇಲೆ ಹರಿಯುವಂತೆ ಮಾಡಿದನಾದ್ದರಿಂದ 'ಧನುಷ್ಕೋಟಿ' ಎಂಬ ಹೆಸರು ಈ ಊರಿಗೆ ಬಂದಿತೆಂದು ಜನ ಹೇಳುತ್ತಾರೆ.

ಕಾವೇರಿ ನದಿಯಲ್ಲಿ ಸೀತೆ ಎಣ್ಣೆ ಮತ್ತು ಅರಿಶಿನ ಸ್ನಾನ ಮಾಡುತ್ತಿರುವಾಗ, ಲಕ್ಷ್ಮಣನು ಆಕಸ್ಮಿಕವಾಗಿ ಅಲ್ಲಿಗೆ ಬಂದನು, ಲಕ್ಷ್ಮಣ ಬಂದುದ್ದನ್ನು ಕಂಡ ಸೀತೆ ತಾನು ಸ್ನಾನ ಮಾಡುವುದನ್ನು ಮೈದುನ ನೋಡಿಯಾನು ಎಂಬ ಭಯದಿಂದ ಮುಂದೆ ನುಗ್ಗಿದಳಂತೆ, ಆಗ ಅಲ್ಲಿದ್ದ ದೊಡ್ಡ ಬಂಡೆಯೊಂದು ಸೀಳಿ ಸೀತೆಗೆ ದಾರಿ ಮಾಡಿಕೊಟ್ಟಿತು. ಆದ್ದರಿಂದ ಇದಕ್ಕೆ 'ಸೀತೆ ಮಡು' ಎಂಬ ಹೆಸರೂ ಬಂದಿದೆ ಎಂಬುದು ಇಲ್ಲಿನ ಜನರ ನಂಬಿಕೆಯಾಗಿದೆ. ಅವಳು ಒಡೆದು (ಸೀಳಿ) ಬಂದ ಬಂಡೆ ಇಂದಿಗೂ ಇದೆ ಎಂದು ಹೇಳಬಹುದಾಗಿದೆ. ಅದು ಎರಡು ಭಾಗವಾಗಿರುವುದು ಕಂಡುಬರುತ್ತದೆ. ಅವಳು ಸ್ನಾನ ಮಾಡಿದ ಸ್ಥಳದಲ್ಲಿ ಮೂರು ರೀತಿಯಾದ ನೀರು ಹರಿದುಬರುವಂತೆ ಕಾಣುತ್ತದೆ. ಆ ಮೂರು ರೀತಿಯಾದ ನೀರು,

(ಅ) ಸೀಗೆಕಾಯಿ
(ಆ) ಎಣ್ಣೆ ನೀರು
(ಇ) ಅರಿಶಿನ ಬಣ್ಣದ ನೀರು

ಈ ಮೂರು ರೀತಿಯ ನೀರು ಹರಿಯುವುದು ಈಗಲೂ ಸಹ ಕಂಡುಬರುತ್ತದೆ. ಈ ಮೇಲಿನ ಆಧಾರಗಳನ್ನು ಮೂಲವಾಗಿಟ್ಟುಕೊಂಡು ಚುಂಚನಕಟ್ಟೆಯ ಸ್ಥಳನಾಮದ ಚರ್ಚೆಯನ್ನು ಮಾಡಬಹುದಾಗಿದೆ.

ಕರ್ನಾಟಕ ರಾಜ್ಯದ ಮೈಸೂರು ಜಿಲ್ಲೆಯ ಕೃಷ್ಣರಾಜನಗರ ತಾಲ್ಲೂಕಿನ 'ಚುಂಚನಕಟ್ಟೆ'ಯೂ, ಜಿಲ್ಲೆಯ ಪ್ರಮುಖ ಯಾತ್ರಾ ಸ್ಥಳವಾಗಿದ್ದೂ, ರಾಜ್ಯದ 'ಭತ್ತದ ಕಣಜ'ವೆಂದು ಪ್ರಸಿದ್ಧವಾಗಿರುವ ಕೃಷ್ಣರಾಜನಗರದಿಂದ ಸುಮಾರು ೧೮ ಕಿ.ಮೀ. ದೂರದಲ್ಲಿ ಕಾವೇರಿ ನದಿಯ ದಂಡೆಯ ಮೇಲೆ ಚುಂಚನಕಟ್ಟೆ ಇದೆ. ಕಾವೇರಿ ಭೋರ್ಗರೆಯುವ ಜಲಪಾತವಾಗಿ ಧುಮ್ಮಿಕ್ಕುವ ಈ ಸ್ಥಳವೂ ಪ್ರೇಕ್ಷಣೀಯ ಪ್ರವಾಸಿ ತಾಣವಾಗಿದ್ದು ನಯನ ಮನೋಹರವಾಗಿದೆ.

ವಿಶಾಲವಾದ ಕಾವೇರಿ ನದಿ ದಂಡೆಯಿಂದ ಆವೃತವಾಗಿರುವ ಚುಂಚನಕಟ್ಟೆ ಗ್ರಾಮವೂ ಪ್ರಮುಖ ನೀರಾವರಿ ಪ್ರದೇಶದಿಂದ ಕೂಡಿದ್ದು, ಹಸಿರಿನಿಂದ ಕಂಗೊಳಿಸುತ್ತದೆ. ಇದು ಹೋಬಳಿ ಕೇಂದ್ರವಾಗಿದ್ದು, ನೋಡಲು ನಗರದಂತೆ ಕಂಡುಬರುತ್ತದೆ. ಈ ಪ್ರದೇಶದಲ್ಲಿ 'ಶ್ರೀರಾಮ ಸಕ್ಕರೆ ಕಾರ್ಖಾನೆ' (ಹಿಂದಿನ ಹೆಸರು) ಅಂಬಿಕಾ ಷುಗರ್ಸ್ ಕಾರ್ಖಾನೆ (ಹೀಗಿನ ಹೆಸರು) ಮತ್ತು 'ಗ್ರಾಫೈಟ್ ಇಂಡಿಯಾ ಪ್ರೈವೇಟ್ ಲಿಮಿಟೆಡ್' ಎಂಬ ವಿದ್ಯುತ್ ಉತ್ಪಾದನಾ ಘಟಕವಿದ್ದು, ಪ್ರಮುಖ ವಾಣಿಜ್ಯ ಪ್ರದೇಶವೂ ಇದಾಗಿದೆ.

ಚುಂಚನಕಟ್ಟೆಯ ಸುತ್ತಮುತ್ತ ಕಬ್ಬು, ತೆಂಗು, ಬಾಳೆ, ಹೊಗೆಸೊಪ್ಪು ಮುಂತಾದ ಪ್ರಮುಖ ಬೆಳೆಗಳು ಕಂಡುಬರುತ್ತವೆ. ವಿಶಾಲವಾದ ಕಾವೇರಿ ದಂಡೆಯ ಪ್ರಾಚೀನ ದೇವಾಲಯ, ಜಲಪಾತ, ಕಬ್ಬಿನ ಗದ್ದೆಗಳನ್ನು ಹೊಂದಿರುವ ಬಳೆ ಪ್ರವಾಸಿ ತಾಣವಾಗಿದೆ. ಇಲ್ಲಿ ನಡೆಯುವ ಶ್ರೀರಾಮ ಜಾತ್ರೆಯು, ದನಗಳ ಜಾತ್ರೆಗೆ ನಾಡಿನಲ್ಲೇ ಪ್ರಸಿದ್ಧವಾಗಿದೆ.

**ಭೌಗೋಳಿಕ ಪರಿಸರ:** ಕನ್ನಡನಾಡು ಹಲವು ತೀರ್ಥಕ್ಷೇತ್ರ–ಗಳಿಂದಲೂ ವೈಭವಪೂರ್ಣ ದೇವಾಲಯಗಳಿಂದಲೂ, ಪುಣ್ಯಪುರುಷರ ತಾಣ–ಗಳಿಂದಲೂ, ಶೋಭಿಸುತ್ತಿರುವ ಪುಣ್ಯಭೂಮಿ ಕಾವೇರಿ, ಕಪಿಲ, ನೇತ್ರಾವತಿ, ತುಂಗಭದ್ರ, ಶರಾವತಿ ಮುಂತಾದ ಪವಿತ್ರ ನದಿಗಳು ಹರಿಯುವುದರ ಜೊತೆಗೆ ಹಲವು ದಿವ್ಯಧಾಮಗಳಿಂದಲೂ ಕೂಡಿದೆ. ಅವುಗಳ ಪೈಕಿ ಮೈಸೂರು ಜಿಲ್ಲೆಯ ಕೃಷ್ಣರಾಜನಗರ ತಾಲ್ಲೂಕಿನ ಚುಂಚನಕಟ್ಟೆಯ 'ಶ್ರೀರಾಮದೇವಾಲಯ'ವೂ ಪುರಾಣ ಪ್ರಸಿದ್ಧವಾದ ಯಾತ್ರಾ ಸ್ಥಳವಾಗಿದೆ.

ಹಚ್ಚ ಹಸಿರು, ಪಚ್ಚೆಪೈರುಗಳಾದ ಭತ್ತ, ಕಬ್ಬು, ರಾಗಿ ಮುಂತಾದ ನವಧಾನ್ಯಗಳನ್ನು ಬೆಳೆಯುವ ನಗರವಾಗಿ ಮಲ್ಲಿಗೆ ಸೇವಂತಿಗೆ, ಮರುಗ, ಜಾಜಿ, ಕೇದಿಗೆ ಹೂಗಳನ್ನು ಬೆಳೆಯುವ ನಗರವಾಗಿ ಋಷಿಮುನಿಗಳ ತಪೋವನವೆಂದು ಹರಣರು ಪಾದಯಾತ್ರೆ ಮಾಡಿದ ನಗರವಾಗಿ ಕಾವೇರಿ ನದಿ ಹರಿಯುವುದರಿಂದ 'ದಕ್ಷಿಣ ಕಾಶಿ'ಯೆಂದು ನಾಮಾಂಕಿತವಾಗಿದೆ. ಮೈಸೂರು ರಾಜರುಗಳಿಂದ ಸ್ಥಾಪಿತವಾದ ಈ ಕೃಷ್ಣರಾಜನಗರದ ಉತ್ತರಾಭಿಮುಖವಾಗಿ ಹೋದಲ್ಲಿ ಅರ್ಕೇಶ್ವರಸ್ವಾಮಿ ಪುಣ್ಯಕ್ಷೇತ್ರ ಹಳೆ ಎಡತೊರೆ, ಅಲ್ಲಿಂದ ಪಶ್ಚಿಮಾಭಿಮುಖವಾಗಿ ಹೋದರೆ ೧೨ ಕಿ.ಮೀ ದೂರದಲ್ಲಿ ಚುಂಚನಕಟ್ಟೆ ಸಿಕ್ಕುತ್ತದೆ. ಇಲ್ಲಿ ಕಾವೇರಿನದಿ ಆನಂದವಾಗಿ ಧುಮುಕಿ, ಅಂಕುಡೊಂಕಾಗಿ ನಲಿಯುತ್ತಾ ಸಾಗುತ್ತಾಳೆ. ಆ ನದಿಯ ದಂಡೆಯ ಮೇಲೆ ಸುಂದರವಾದ,

ಪ್ರಶಾಂತವಾದ ಗಡಿಯೊಂದಿದೆ. ಅದೇ ತ್ರೇತಾಯುಗದಲ್ಲಿ ತೃಣಬಿಂದು ಮಹಾಮುನಿ ತಪಗೈದ, ಚುಂಚ-ಚುಂಚಿ ಎಂಬುವವರು ಮುಕ್ತಿ ಪಡೆದ, ಶ್ರೀರಾಮ ಮತ್ತು ಸೀತೆಯರು ತಮ್ಮ ವಿವಾಹ ವೈಭವವನ್ನು ತನ್ನ ಭಕ್ತನಿಗಾಗಿ ಮರುದರ್ಶನ ಮಾಡಿದ ಪುರಾಣ ಪ್ರಸಿದ್ಧವಾದ ಶ್ರೀರಾಮದೇವಾಲಯ. ಕೃ.ರಾ.ನಗರ ತಾಲ್ಲೂಕಿನ ಚುಂಚನಕಟ್ಟೆ ಸುಂದರ ಪರಿಸರದಿಂದ ನಿರ್ಮಾಣಗೊಂಡ ಗ್ರಾಮ, ಕಾವೇರಿನದಿಯ ದಂಡೆಯಲ್ಲಿರುವ ಗ್ರಾಮ ಸುತ್ತಮುತ್ತ ಹಸಿರಿನಿಂದ ಕಂಗೊಳಿಸುತ್ತಿದೆ. ಹೋಬಳಿ ಕೇಂದ್ರವಾದ ಇದು ಅಂಬಿಕಾ ಷುಗರ್ಸ್ ಕಾರ್ಖಾನೆ, ಗ್ರಾಫೈಟ್ ಒಂದು ಸುಂದರ ಪ್ರೇಕ್ಷಣೀಯ ಸ್ಥಳವಾಗಿದೆ.

**ಶ್ರೀರಾಮ ದೇವಾಲಯ ನಿರ್ಮಾಣಕ್ಕೆ ಕಾರಣವಾದ ಪೌರಾಣಿಕ ಹಿನ್ನೆಲೆ**

ಚುಂಚನಕಟ್ಟೆ ಎಂದು ಈ ಸ್ಥಳ ನಾಮನಿರ್ದೇಶಿತವಾಗಲೂ ತನ್ನದೇ ಆದ ಪುರಾಣ ಪ್ರಸಿದ್ಧವಾದ ಕಥೆಯನ್ನು ಒಳಗೊಂಡಿದೆ. ಪ್ರಸಿದ್ಧ ಯಾತ್ರಾಸ್ಥಳವಾದ ಈ ಗ್ರಾಮದ ಇತಿಹಾಸದ ಬಗ್ಗೆ ಕೆಣಕಿದಾಗ ಅದು ತ್ರೇತಾಯುಗದಷ್ಟು ಹಿಂದೆ ಹೋಗುತ್ತದೆ.

ತ್ರೇತಾಯುಗದ ಹಿಂದಿನ ದೇವಾಲಯದಲ್ಲಿ ದಂಡಕಾರಣ್ಯ ಎಂಬ ದಟ್ಟವಾದ ಅರಣ್ಯವಿತ್ತು. ಈ ಅರಣ್ಯದಲ್ಲಿ ಮೃಗ, ಪಕ್ಷಿಗಳು ಸ್ನೇಹಭಾವದಿಂದ ಬಾಳುವೆ ನಡೆಸುತ್ತಿದ್ದವು. ಆ ಅರಣ್ಯದಲ್ಲಿ ಕಾಮಧೇನು ಹುಲಿಯ ಮೈ ನೆಕ್ಕುತ್ತಿತ್ತು. ಮೊಲಗಳು ಸಿಂಹದ ಮರಿಗಳ ಜೊತೆಯಲ್ಲಿ ಆಟವಾಡುತ್ತಿದ್ದವು. ಸರ್ಪದ ಜೊತೆಯಲ್ಲಿ ಮಂಡೂಕ ಸರಸವಾಡುತ್ತಿದ್ದರೆ ಕಿರುಬನ ಜೊತೆಯಲ್ಲಿ ಹುಲ್ಲೆಕರು ಒಟ್ಟಿಗೆ ಮೇಯುತ್ತಿತ್ತು. ಬಾಳೆ ಬಾಗಿ, ತೆಂಗುಗಳು ತೂಗಿ, ಪರಿಮಳದಿಂದ ಕೂಡಿದ ಪುಷ್ಪಗಳಿಂದ ಆ ಅರಣ್ಯ ಕಂಗೊಳಿಸುತ್ತಿತ್ತು. ಇದಕ್ಕೆ ಕಾರಣ ಆ ಅರಣ್ಯದಲ್ಲಿ ದಿವ್ಯಜ್ಞಾನಿ ತೃಣಬಿಂದು ಮಹಾಮುನಿ ಎಂಬ ಯೋಗಿ ತಪಸ್ಸನ್ನಾಚರಿಸುತ್ತಿದ್ದ ಸ್ಥಳವಾಗಿತ್ತು. ಆ ಯೋಗಿಯ ತಪಸ್ಸು ಯುಗಗಳ ತಪಸ್ಸಾಗಿತ್ತು. ಇವರ ತಪಸ್ಸನ್ನು ಮೆಚ್ಚಿ ಶ್ರೀಮನ್ನಾರಾಯಣದರ್ಶನ ನೀಡಿ ಆಶೀರ್ವದಿಸಿ ಮತ್ತೆ ತ್ರೇತಾಯುಗದಲ್ಲಿ ದರ್ಶನ ನೀಡಿ ಮೋಕ್ಷಕೊಡುವುದಾಗಿ ಅಂತರ್ಧಾನನಾದನು, ಅದರಂತೆ ಆ ಮಹಾಮುನಿ ಆ ಪುಣ್ಯಸ್ಥಳದಲ್ಲಿ ಯುಗ ಕಳೆದರು.

ತ್ರೇತಾಯುಗ ಬಂತು, ಅದೇ ಅರಣ್ಯದ ಪಕ್ಕದಲ್ಲಿ ದಟ್ಟವಾದ; ಭಯಾನಕವಾದ ಕಾಡು, ಅಲ್ಲಿ ಚುಂಚ-ಚುಂಚಿ ಎಂಬ ಬೇಟೆಗಾರ ದಂಪತಿಗಳು ಇದ್ದರು. ಅವರು ತುಂಬಾ ಬಲಿಷ್ಠರಾಗಿದ್ದರಲ್ಲದೆ ಸದಾ ಪ್ರಾಣಿಗಳನ್ನು ಬೇಟೆಯಾಡುತ್ತ, ಹಿಂಸೆ ಮಾಡುತ್ತಾ ಜೀವನ ನಡೆಸುತ್ತಿದ್ದರು. ಜೊತೆಗೆ ದಾರಿ ಪ್ರಯಾಣಿಕರನ್ನು, ಮಹಾಮುನಿಯ ಆಶ್ರಮಕ್ಕೆ ಬರುವವರನ್ನು ದೋಚುವುದಲ್ಲದೆ, ಅವರನ್ನು ಹಿಂಸೆಯಿಂದ ಕೊಲ್ಲುತ್ತಿದ್ದರು. ಅವರು

ತಮ್ಮದೇ ಆದ ಒಂದು ಬಲಿಷ್ಠ ಸಾಮ್ರಾಜ್ಯವನ್ನು ಮಾಡಿಕೊಂಡು ಮೆರೆಯುತ್ತಿದ್ದರು. ಇವರು ಬಹಳ ಕ್ರೂರಿಗಳಾಗಿದ್ದರು. ಇವರನ್ನು ಕಂಡರೆ ಕಾಡಿಗೆ ಕಾಡೇ ಹೆದರುವಂತಿತ್ತು.

ಒಂದು ದಿನ ಬೇಟೆಯಾಡಲು ಚುಂಚ ತನ್ನ ಜನರೊಂದಿಗೆ ಕಾಡನ್ನೆಲ್ಲ ಅಲೆದರೂ ಯಾವ ಪ್ರಾಣಿಯೂ ಸಿಗಲಿಲ್ಲ. ಕಾಡೆಲ್ಲ ತಿರುಗಿ ಬೇಸತ್ತು ಕಡೆಗೆ ತೃಣ ಮುನಿಯ ಆಶ್ರಮವಿದ್ದ ಕಡೆ ಬಂದರು. ಆ ಮಹಾಮುನಿಯ ಆಶ್ರಮದಲ್ಲಿದ್ದ, ಆನೆ, ಹುಲಿ, ಜಿಂಕೆ, ಸಿಂಹ ಮುಂತಾದ ಪ್ರಾಣಿಗಳನ್ನು ಕಂಡು ಹರ್ಷಿತರಾಗಿ 'ಕಾಡಿನಲ್ಲಿರುವ ಪ್ರಾಣಿಗಳೆಲ್ಲ ಇಲ್ಲೇ ಇವೆ' ಎಂದು ಹೇಳುತ್ತ ಚುಂಚ ಮತ್ತು ಅವನ ಕಡೆಯವರು ತಮ್ಮ ದಾಹವನ್ನು ಹಿಂಗಿಸಿಕೊಳ್ಳಲು ಆ ಪ್ರಾಣಿಗಳತ್ತ ಬಾಣ ಪ್ರಯೋಗ ಮಾಡಿದರು, ಭರ್ಜಿಯಿಂದ ಹೊಡೆದರು. ಇವರು ಹೊಡೆದ ಬಾಣ, ಭರ್ಜಿಗಳಾವುವು ಪ್ರಾಣಿಗಳ ಸನಿಹವೂ ಹೋಗಲಾರದಾದವು. ಪ್ರಾಣಿಗಳು ಎಂದಿನಂತೆ ಸಹಜವಾಗಿ ಆಟವಾಡುತ್ತಿದ್ದವು. ಇವರು ಶಬ್ದಮಾಡಿದರು ಅಲುಗಾಡಲಿಲ್ಲ.

ಇದನ್ನು ಕಂಡ ಚುಂಚ "ಏನಿದು? ನನ್ನ ಹೆಸರಂ ಕೇಳಿದರೆ ಕಾಡಿನ ಪ್ರಾಣಿಗಳೆಲ್ಲ ಓಡಿ ಹೋಗಿ ಗುಹೆಗಳಲ್ಲಿ ಅವಿತುಕೊಳ್ಳುತ್ತವೆ! ಆದರೆ ಇಲ್ಲಿ ಒಂದು ಪ್ರಾಣಿಯು ಅಲುಗಾಡದೆ ತಮ್ಮಷ್ಟಕ್ಕೆ ತಅವೇ ಚೆಲ್ಲಾಟವಾಡುತ್ತಿವೆಯಲ್ಲ! ಏನಿರಬಹುದು? ಏನಾದರಾಗಲಿ ಇಲ್ಲಿಯೂ ಇಂದು ನಮ್ಮವರಿಗೆ ಬೇಟೆ ಇಲ್ಲ. ಈ ದಿನ ಇಲ್ಲಿಯೇ ಬೇಟೆಯಾಡಬೇಕೆಂದು" ತಮ್ಮಲ್ಲಿದ್ದ ಹಲವು ರೀತಿಯ ಬಾಣಗಳನ್ನು ಪ್ರಯೋಗಿಸಿದ. ಆದರೆ ಒಂದು ಬಾಣವೂ ಆಶ್ರಮದ ಒಳಗೆ ಕೂಡ ಹೋಗಲಿಲ್ಲ. "ಇದೇನಾಶ್ಚರ್ಯ?" ಎಂದು ಚಿಂತಿಸುತ್ತಾ ಎಲ್ಲ ಕಡೆಯೂ ನೋಡಿದ. ಒಂದು ಎತ್ತರವಾದ ಗುಡ್ಡದ ಮೇಲೆ ಒಬ್ಬ ಭೈರಾಗಿ ಕುಳಿತಿರುವುದನ್ನು ಕಂಡು "ಓ! ಈಗ ಗೊತ್ತಾಯಿತು. ಯಾವನೋ ಒಬ್ಬ ಭೈರಾಗಿ ನನ್ನ ಬಾಣಗಳು ಪ್ರಾಣಿಗಳಿಗೆ ತಗುಲದಂತೆ ಮಾಯಮಂತ್ರ ಹಾಕಿ ಕುಳಿತಿದ್ದಾನೆ. ಹೇ! ಭೈರಾಗಿ, ಎದ್ದೇಳು ಬಾರೋ ಇಲ್ಲಿ, ನೀನು ಬಾರದೇ ಇದ್ದರೆ ನನ್ನ ಬಾಣಗಳಿಗೆ ಆಹುತಿಯಾಗಬೇಕಾಗುತ್ತದೆ. ಎದ್ದು ಬರುವೆಯೋ ಇಲ್ಲವೋ? ನೀನು ಬಾರದೆ ನಿನ್ನ ಗಲುಡಿಸಲನ್ನು ಕಿತ್ತೆಸೆಯುತ್ತೇನೆ. ಎದ್ದು ಬಾರೋ, ನಿನ್ನ ತಲೆ ಕಡಿದುಬಿಡುತ್ತೇನೆ" ಎಂದು ಘರ್ಜಿಸಿ ಹಾರಾಡಿದ. ಶಕ್ತಿ ಇರುವವರೆಗೂ ಕೂಗಿದ. ಆದರೆ ಶಾಂತಮೂರ್ತಿಗಳಾದ, ತ್ರಿಕಾಲ ಜ್ಞಾನಿಗಳಾದ ತೃಣಬಿಂದು ಮುನಿಗಳು ಕುಂತಲ್ಲೆ ಹುಸಿನಗೆ ನಗುತ್ತಾ "ವತ್ಸ! ಚುಂಚ ಏಕೆ ಮಗು ಕೂಗಿಕೊಳ್ಳುವೆ"? ಎಂದರು. ಇದನ್ನು ಕಂಡ ಚುಂಚ "ಎಲಾ ಇವನಾ, ನನ್ನ ಹೆಸರು ಹಿಡಿದು ಕೂಗ್ತಾನಲ್ಲಪ್ಪೋ! ಯಾರ್‍ಲಾ ಇವನು! ನನ್ನ ಹೆಸ್ರು ಹೆಂಗ್ ಗೊತ್ತಾಯ್ತು? ಅಯ್ಯೋ! ಅಲ್ಲೆ ಕೂತ್ಕೊಂಡು

ಮಾತಾಡ್ತಿಯಾ, ನನ್ನ ಹೆಸ್ರು ಬೇರೆ ಕೂಗ್ತೀಯ, ಯಾರಯ್ಯ ನೀನು?" ಎಂದು ಅರೆಚಾಡಿದ. ಅದಕ್ಕೆ ಆ ಮುನಿ "ನೀನು ಆವಾಗ್ಗಲೆ ಕೂಗಿದೆಯಲ್ಲ ಬಯರಾಗಿ ಅಚಿತ" ಎಂದರು. "ನೋಡಯ್ಯ ನೀನು ಯಾರೇ ಆಗಿರು ನಾನು ಈ ಕಾಡಿಗೆ ರಾಜ, ನೀನು ನನಗೆ ಗೊತ್ತಿಲ್ಲದಂಗೆ ಇಲ್ಲಿಗೆ ಬಂದು ಗುಡಿಸಲು ಕಟ್ಟಿಕೊಂಡಿದ್ದಿಯಾ, ಅಲ್ಲದೆ ಆಡು, ಕುರಿ, ಹುಲಿ, ಹುಲ್ಲೇಕರು, ಹುಲಿ, ಕಿರುಬ ಎಲ್ಲವನ್ನೂ ನನಗೆ ಸಿಕ್ಕದಂತೆ ಹಿಡಿದುಕೊಂಡು ಬಂದು ಕೂಡಿಹಾಕಿಕೊಂಡಿದ್ದಿಯಾ, ನಾವೆಲ್ಲಾ ಎಲ್ಲಿ ಹೋಗಬೇಕು? ನೋಡು ನೋಡು ನಮ್ಮತ್ರ ಇವೆಲ್ಲಾ ಆಟ ಬೇಡ. ನಾನು ಈ ಕಾಡಿಗೆ ರಾಜ, ಇವೆಲ್ಲಾ ನಮ್ಮದು, ನಂಗೇ ಸೇರಬೇಕು, ನೋಡು ನಂಗೆ ಇವತ್ತೂ ಭೇಟಿಯಿಲ್ಲ. ಆ ಹುಲ್ಲೆಕರು ಮೇಕೆ ಕುರಿ ಬಿಟ್ಟುಬಿಡು, ಇಲ್ಲ ಅಂದ್ರೆ......!

"ಇಲ್ಲಾ ಅಂದರೆ ಏನು ಮಾಡುತ್ತೀಯಾ?

"ಅಯ್ಯೋ! ಏನ್ ಮಾಡ್ತೀಯಾ ಅಂತ ಕೇಳ್ತಿಯಾ, ನೀನು ಕೊಡಲಿಲ್ಲಾ ಅಂದ್ರೆ ನೋಡು ಇಲ್ಲಿ ನನ್ನ ಬಾಣದಿಂದ ಭೂಗತ ಮಾಡಿ ಅವನ್ನೆಲ್ಲಾ ಎಳಕೊಂಡು ಹೋಗಬೇಕಾಯ್ತದೆ, ತಿಳೀತಾ?" ಎನ್ನುತ್ತಾನೆ. "ನಾನು ನನ್ನ ಆಶ್ರಮದಲ್ಲಿರುವ ಒಂದು ಪ್ರಾಣಿಯನ್ನೂ ನಿನಗೆ ಕೊಡುವುದಿಲ್ಲ, ನೀನು ಏನು ಬೇಕಾದರೂ ಮಾಡಿಕೋ"

"ನೋಡು ಬೇಡ, ನನ್ನ ರೇಗಿಸಬೇಡ, ನನಗೆ ಕೋಪ ಬಂದ್ರೆ ನನ್ನ ಬಾಣದಿಂದ ನಿನ್ನನ್ನು ಕೊಂದು ಇವನ್ನೆಲ್ಲಾ ಎಳೆದುಕೊಂಡು ಹೋಗ್ತೀನಿ".

"ಹಾಗೆಮಾಡು" ಎಂದು ಮೌನದಿಂದ ಕುಳಿತುಕೊಂಡನು ಆ ಮುನಿ.

"ಅಯ್ಯೋ ನಾನು ಒಂದು ತರ ಮನುಷ್ಯ, ನಾನು ಈ ಕಾಡಿಗೆ ರಾಜ ಇಲ್ಲಿಯದೆಲ್ಲಾ ನನಗೇ ಸೇರಬೇಕು. ನಿನಗೇನು ಕೇಳೋದು, ಜಮಾಯಿಸ್ತೀನಿ ನೋಡೀಗ" ಎಂದು ಬಾಣ ಹೊಡೆಯುವನು. ಒಂದು ಬಾಣವೂ ಆಡುತ್ತಿದ್ದ ಪ್ರಾಣಿಗಳ ಮೇಲೆ ಹೋಗಲಿಲ್ಲ. "ನೋಡು ಈ ಆಟ ಬೇಡ. ನಿನ್ನ ಮಾಯಮಂತ್ರ ಬೇಡ. ನನ್ನ ರೇಗಿಸಬೇಡ, ಇವುಗಳ ಮೇಲೆ ಬಿಡೋ ಬಾಣಾನ ನಿನ್ನ ಮೇಲೆ ಬಿಡುತ್ತೇನೆ ಗೊತ್ತಾ. ಅಯ್ಯಾ ಬೈರಾಗಿ ಬೇಡನೋಡು" ಎಂದು ಕೋಪಗೊಂಡು ಉದ್ರೇಕದಿಂದ "ಎಲ್ರೂ ಬಾಣ ಈಟಿ ಎಸೀರಿ" ಎಂದು ಗರ್ಜಿಸಿದನು. ಯಾರ ಬಾಣವೂ ಮತ್ತು ಈಟಿಯೂ ತಗುಲಿಲ್ಲ. ಪ್ರಾಣಿಗಳು ಹಾಗೆಯೇ ಆಡುತ್ತಿದ್ದವು. ಬೈರಾಗಿ ಹಾಗೆಯೇ ಕುಳಿತ್ತಿದ್ದ. ಚುಂಚ ಅರಚಿದ, ಕೂಗಿದ, ಉದ್ರೇಕದಿಂದ ಕೂಗಿ ಕೂಗಿ ಸಾಕಾಗಿ ಹಾಗೆಯೇ ಕುಳಿತುಕೊಂಡ. ಅವನ ಹಾಗೆ ಎಲ್ಲರೂ ಬೆಪ್ಪಾದರು.

ಬೈರಾಗಿ ಜ್ಞಾನಮುಗ್ಧರಾಗಿ ಮತ್ತೇ ಕಣ್ತೆರೆದು ನಕ್ಕು ನಭೋಮಂಡಲವನ್ನು ನೋಡಿ ಸುಮ್ಮನಾದರು. ಇದನ್ನು ನೋಡಿದ ಚುಂಚ ಮತ್ತೆ ಚೇತರಿಸಿಕೊಂಡ. ಚುಂಚಿ "ಅಯ್ಯೋ ಆ ಬೈರಾಗಿ ನಮ್ಮ ನೋಡಿ ನಕ್ಕಂಗಾಯ್ತು, ಇವ ಸುಮ್ಮನೆ ಬೈರಾಗಿ ಅಲ್ಲ, ಇವನಾರೋ ದೊಡ್ಡ ಅಯ್ಯನೋರು ಇರಬೇಕು, ಸರಿಯಾಗಿ ದಿಟ್ಟಿಸಿ ನೋಡು" ಎಂದಳು. ಚುಂಚ ಎಚ್ಚೆತ್ತು, ಎದ್ದು ಬೈರಾಗಿಯನ್ನು ದಿಟ್ಟಿಸಿ ನೋಡಿದನು. ಆಗ ಬೈರಾಗಿ ದಿವ್ಯಮೂರ್ತಿಯಾಗಿ ಕಂಡನು. "ಅಯ್ಯಾ ನನ್ನ ಒಡೆಯ, ನಾನು ಈ ಕಾಡಿಗೆ ರಾಜ, ಆದರೆ ನನಗಿಂತಲೂ ನೀನು ದೊಡ್ಡವನು, ಸ್ವಾಮಿ ನೀವು ಯಾರು ನನಗೆ ತಿಳಿಯದು, ನಾನು ಮಾಡಿದ ಅಪರಾಧವನ್ನು ಮನ್ನಿಸಯ್ಯ, ನನ್ನ ಅಹಂಕಾರ ಕರಗಿತು. ನಾನು ನಿನಗೆ ಶರಣಾದೆ ತಂದೆ. ನೀನು ಯಾರಯ್ಯ? ನಮ್ಮನ್ನೆಲ್ಲಾ ಕಾಪಾಡಯ್ಯ ಎಂದು ಅಂಗಲಾಚಿದ".

ತೃಣಬಿಂದು ಮಹಾಮುನಿಗಳು ಪ್ರಸನ್ನರಾಗಿ "ಅಯ್ಯಾ ಚುಂಚಾ-ಚುಂಚಿ ಹೋದ ಜನ್ಮದಲ್ಲಿ ದೇವೇಂದ್ರನ ಬಳಿಯಲ್ಲಿದ್ದ ಕಿನ್ನರರು ನೀವು. ನೀನು ಬಲಪ್ರಯೋಗ ಕಲಿಯುವಾಗ ಒಂದು ಮೊಲವನ್ನು ಕೊಂದೆ. ಅದನ್ನು ನೋಡಿದ ದೇವೇಂದ್ರ ಕೋಪಗೊಂಡು ನೀವಿಬ್ಬರೂ ಭೂಲೋಕದಲ್ಲಿ ಬೇಡರಾಗಿ ಎಂದು ಶಾಪ ಕೊಟ್ಟನು. ಮತ್ತೆ ವರ ಬೇಡಲು ತ್ರಿಕಾಲಜ್ಞಾನಿ ಮುನಿಯನ್ನು ನೋಡಿದಾಗ ಮಾರ್ಗದರ್ಶನ ನೀಡುತ್ತಾರೆ ಎಂದನಂತೆ. ಅದರಂತೆ ನೀವು ಶಾಪವಿಮುಕ್ತರಾಗುವಿರಿ" ಎಂದನಾ ಮಹಾಮುನಿ. ಆಗ ಚುಂಚಾ ಚುಂಚಿಗೆ ಅರಿವಾಗಿ ಅವರು ತೃಣಬಿಂದು ಮಹಾಮುನಿಗೆ ಶರಣಾಗಲು, ಆ ಮುನಿ "ನೀವು ಇದುವರೆಗೆ ಬಹಳ ಪ್ರಾಣಿಗಳನ್ನು, ಜನರನ್ನು ಕೊಂದು ಪಾಪ ಕಟ್ಟಿಕೊಂಡಿರುವಿರಿ, ಅದನ್ನು ಹೇಗೆ ಕಳೆಯುವಿರಿ, ನಿಮಗೆ ನರಕ ಪ್ರಾಪ್ತಿಯಾಗಿದೆ" ಎಂದರು.

"ಅಯ್ಯೋ! ನಾವು ತಿಳಿದೋ ತಿಳಿಯದೆಯೋ ಮಾಡಿರುವ ಪಾಪವನ್ನು ಕಳೆಯಲು ತಾವೇ ದಯಮಾಡಿ ದಾರಿ ತೋರಿಸಬೇಕು ಅಯ್ಯಾ" ಎಂದು ಅಂಗಲಾಚಿ ಬೇಡಿಕೊಂಡರು. ಅದಕ್ಕೆ ಮಹಾಮುನಿಯಾದ ತೃಣಬಿಂದು ಮಹಾಮುನಿ ಪ್ರಸನ್ನರಾಗಿ, "ವತ್ಸ, ನೀನು ಇದುವರೆಗೂ ಮಾಡಿದ ಪಾಪ ಕಳೆಯಲು ನೀನು ವಾಸವಾಗಿರುವ ನಿನ್ನ ಹೆಸರಿನಿಂದಲೇ ನಾಮಾಂಕಿತವಾಗಿರುವ ಚುಂಚಾರಣ್ಯದಲ್ಲಿ ನಾರುಮಡಿಯನ್ನುಟ್ಟು ಮುಡಿಗೆ ಹೂಗಳನ್ನಿಟ್ಟು ಬಿಲ್ಲು ಬತ್ತಳಿಕೆಗಳನ್ನು ಹಿಡಿದು ಮುಂದೆ ಬರುವ ಶ್ರೀರಾಮ, ಮಧ್ಯ ಬರುವ ಸೀತೆ, ಹಿಂದೆ ಬರುವ ಲಕ್ಷ್ಮಣ ಈ ಕಾಡಿಗೆ ಬಂದೊಡನೆಯೇ ಪ್ರಾಣಿಗಳು ಉಲ್ಲಾಸದಿಂದ ಸಂತೋಷದಿಂದ ಕೂಗುತ್ತಾ ಹಂಸ ಹಾಡಿ, ಕೋಗಿಲೇ ಸ್ವರಮಾಡಿ, ನವಿಲು ನಾದಮಾಡುತ್ತವೆ. ಆ ಸುಂದರ ದಿನ ಕಂಡಾಗ ರಾಮಬರುವ

ದಿನವಾಗುತ್ತದೆ. ಆ ದಿನದವರೆಗೂ ನೀನು ಪ್ರಾಣಿಗಳನ್ನು ಸಂರಕ್ಷಿಸು, ಜನರಲ್ಲಿ ಪ್ರೀತಿ ಭಾವನೆ ಬೆಳೆಸಿಕೊಂಡು ಇರು. ಆ ದಿನ ಬಂದಾಗ ನನಗೆ ತಿಳಿಸು. ಯಶವಂತನಾಗು, ಅಲ್ಲಿಯವರೆಗೆ ಭಕ್ತಿಯಿಂದ ರಾಮ ರಾಮ ಎಂದು ಇಲ್ಲಿಯೇ ಸೇವೆಮಾಡುತ್ತಾ ಇರು" ಎಂದರು. "ಆಯಿತು ನನ್ನ ಒಡೆಯ, ನಿನ್ನ ಚಿತ್ತದಂತೆ ನಡೆಯುವನು. ಆ ಸ್ವಾಮಿಯನ್ನು ಕಾಣುವೆನು, ಆ ರಾಮನ ಹೆಸರಿನಲ್ಲಿ ಬಾಳುವೆನು ಸಾಯುವೆನು" ಎಂದನು.

"ಆ ಸ್ವಾಮಿಯ ಹೆಸರು ಲಾಮ ಅಲ್ಲ, ಶ್ರೀರಾಮಚಂದ್ರ", "ಅಯ್ಯಾ ಅಷ್ಟು ಉದ್ದನಾಲಿಗೆ ತಿರುಗಲ್ಲ ನನ್ನ ಒಡೆಯ". "ಹಾಗಾದರೆ ಈಗ ಹೇಳಿ" ಎಂದು ಎದುರಿಗಿದ್ದ ಎರಡು ಮರಗಳನ್ನು ತೋರಿಸುತ್ತಾ, "ಅಲ್ಲಿರುವುದು ಏನು" ಎಂದರು. 'ಅದು ಮರ ಒಡೆಯ".

"ನೋಡಿ ನೀವು ಮರಗಳನ್ನು ನೋಡುತ್ತೀರಿ, ನಾನು ಅದು ಏನು ಎಂದಾಗ ಮರ ಎನ್ನಬೇಕು. ಹಾಗೆ ಹೇಳುತ್ತಾ ಇದ್ದರೆ ನಿಮ್ಮೆಲ್ಲರಿಗೂ ರಾಮನಾಮ ಬರುತ್ತದೆ", ಅದರಂತೆ ಚುಂಚ ಚುಂಚಿಯರು ಮತ್ತು ಬೇಡರು ಒಡೆಯ ಹೇಳಿದಂತೆ ಅದು ಮರ ಇದು ಮರ, ಅದು ಮರ ಎಂದು ಹೇಳುತ್ತಾ ರಾಮ ರಾಮ ಎಂದು ಭಜನೆ ಮಾಡುತ್ತಾ, ಭಕ್ತಿಯಲ್ಲಿ ಎಲ್ಲರೂ ಮೈ ಮರೆತಿರುವ ಸಮಯದಲ್ಲಿ ಶ್ರೀರಾಮನ ಅಮೃತ ವಾಣಿಯನ್ನು ಕೇಳುತ್ತಾ ತೃಣ ಬಿಂದು ಮಹಾಮುನಿಗಳು ಆಶ್ರಮದಲ್ಲಿ ಧ್ಯಾನಮಗ್ನರಾದರು. ಆ ಕಾಡಿನಲ್ಲಿ ಅಂದಿನಿಂದ ಪ್ರಾಣಿಗಳು, ಜನರು ನಿರ್ಭಯವಾಗಿ ತೃಣಬಿಂದು ಮಹಾಮುನಿಗಳ ಆಶ್ರಮಕ್ಕೆ ಬಂದು ಅವರ ದರ್ಶನ ಪಡೆದು ಭಕ್ತರಾಗುತ್ತಿದ್ದರು.

ಹೀಗೆ ಚುಂಚ ಚುಂಚಿ ತೃಣಬಿಂದು ಮಹಾಮುನಿ ಅವರ ಆದೇಶದಂತೆ ರಾಮನ ಸ್ಮರಣೆಯಲ್ಲಿ ಸೇವೆ ಮಾಡುತ್ತಿದ್ದರು. ಭಕ್ತಾದಿಗಳಿಗೆ ಯಾವ ತೊಂದರೆಯೂ ಇಲ್ಲ, ಪ್ರಾಣಿಗೆ ಯಾವ ಭಯವೂ ಇಲ್ಲ, ಗೆಡ್ಡೆ ಗೆಣಸುಗಳನ್ನು ತಿನ್ನುತ್ತಾ ರಾಮಧ್ಯಾನದಲ್ಲಿ ದಿನಗಳನ್ನು ಕಳೆಯುತ್ತಿದ್ದರು. ತೃಣಬಿಂದು ಮಹಾಮುನಿಗಳು ಹೇಳಿದ ದಿನ ಬಂದೇಬಿಟ್ಟಿತು.

ಶ್ರಾವಣಮಾಸದ ಸೂರ್ಯೋದಯದ ಹೊಂಗಿರಣ ತಳತಳನೆ ಹೊಳೆಯುತ್ತಾ ನದಿಯ ಮೇಲೆ ಬಿದ್ದಾಗ ಹಕ್ಕಿಗಳ ಚಿಲಿಪಿಲಿನಾದ, ನವಿಲಿನ ನೃತ್ಯ, ಕೋಗಿಲೆ ಕೂಗು, ಹಸಿರು ನೆಲದ ಮೇಲೆ ಕಾಡು ಮಲ್ಲಿಗೆ ಹೂಗಳು, ಫಲಪುಷ್ಪಗಳು ಉದುರಿ ಬಾಳೆ ಬಾಗಿ ತೆಂಗು ತೂಗುತ್ತಿದೆ. ಇದನ್ನು ಕಂಡು ಚುಂಚ ಚುಂಚಿಯರು ತಮ್ಮವರೆಲ್ಲರನ್ನು ಕರೆದು

ಬೈರಾಗಿ ಸ್ವಾಮಿ ಹೇಳಿದ ನನ್ನಯ್ಯ ರಾಮಯ್ಯ ಬರುವ ದಿನಗಳ ಕಾಲ ಬಂದಿದೆ. ಆದ್ದರಿಂದ ರಾಮಯ್ಯ ಬರುವುದರೊಳಗೆ ನಾವು ಒಂದು ಕುಟೀರ ಕಟ್ಟೋಣ ಎಂದು ಒಯ್ಯಂಬಯಲು ಕಾವೇರಿ ಹರಿಯುವ ಹೊನಲು ಅಚ್ಚ ಹಸಿರಿನ ತೋಪು ಹೂ ಗಿಡಗಳಿಂದ ಸುಂದರವಾಗಿ ಕಾಣುವ ಜಾಗ ನೋಡಿ ಆಶ್ರಮ ಕಟ್ಟಿದರು. ವನದೇವತೆಯ ಮಡಿಲಾದ, ರಾಮಲಿಂಗವಿರುವ ಸ್ಥಳದಲ್ಲಿ ರಾಮನಾಮ ಎಂದು ದಿನೇ ದಿನೇ ಭಜಿಸುತ್ತಿರಲು ಶ್ರೀರಾಮಪಾದ ಬೆಳೆಸಿದ.

ಎಲ್ಲರಿಗೂ ರಾಮ ದರ್ಶನವಾಗಿ ಆ ಸುಂದರ ಸ್ಥಳ ನೋಡಿ ತಮ್ಮನ್ನು ಸ್ವಾಗತಿಸಿದ ಕಾಡು ಬೇಡರು ಕೆಲವು ದಿನಗಳು ನಮ್ಮ ಸೇವೆಯನ್ನು ಸ್ವೀಕರಿಸಬೇಕೆಂದು ಬೇಡಿದರು. ಶ್ರೀರಾಮ ಸೀತೆಯೊಡನೆ ಕೆಲವು ದಿನಗಳನ್ನು ಕಳೆದು, ಅವರ ಆತಿಥ್ಯಕ್ಕೆ ಮನಸೋತನು.

ಚುಂಚ ಆನಂದ ಭರಿತನಾಗಿ ತೃಣಬಿಂದು ಮಹಾಮುನಿಯವರಿಗೆ "ಜಗದೊಡೆಯ ರಾಮಯ್ಯ ಬಂದವರೆ ನನ್ನೊಡೆಯ" ಎಂದು ಆಶ್ರಮಕ್ಕೆ ಬಂದು ಹೇಳಿದ. ಮಹಾಮುನಿಗೆ ಮಹಾದಾನಂದವಾಯಿತು. ತಾವು ಬೆಳಗಿನ ಜಾವದಲ್ಲಿ ಕಂಡ ಜಟಾಧಾರಿಗಳಾದ ರಾಮ ಲಕ್ಷ್ಮಣರನ್ನು, ಚುಂಚಯ್ಯ ಬಂದು ಹೇಳಿದ್ದನ್ನು ಕೇಳಿ ಸಂತೋಷಗೊಂಡು ಯುಗ ಯುಗಗಳ ತಪ್ಪಸ್ಸು ಸಾರ್ಥಕವಾಯಿತೆಂದು, ಶಿಷ್ಯರನ್ನು ಕರೆದು ಶ್ರೀರಾಮ ಇತ್ತ ಬರುವರು, ಅವರ ಪಾದ ದರುಷನದಿಂದ ಈ ನನ್ನ ಕುಟೀರವು ಪಾವನವಾಗಲಿ, ಎಲ್ಲಾ ಸಿದ್ಧತೆಗಳನ್ನು ಮಾಡಿ ಎಂದರು.

ಮಹಾಮುನಿಯ ಆಶ್ರಮ ದೇವಲೋಕಕ್ಕೆ ಸಮನಾಗಿತ್ತು. ಈ ಭೂಲೋಕದ ಯುಗ ಪುರುಷರಾದ ತೃಣಬಿಂದು ಮಹಾಮುನಿ ಕುಳಿತಲ್ಲೇ ಧ್ಯಾನಿಸುತ್ತಾ ರಾಮನಿಗೆ ಭಿನ್ನವಿಸಿದರು. ರಾಮ ಯೋಗನಿದ್ರೆಯಲ್ಲಿದ್ದನು, ತೃಣಬಿಂದು ಭಿನ್ನವಿಸಿದ್ದನ್ನು ಅರಿತು ಉದಯೋನ್ಮುಖ ಸೂರ್ಯೋದಯದ ಶ್ರಾವಣಮಾಸದಲ್ಲಿ ರಾಮ, ಸೀತೆ, ಲಕ್ಷ್ಮಣರು ಆಶ್ರಮಕ್ಕೆ ಬರುತ್ತಿರಲು ಬೇಡರ ವಾದ್ಯ, ಕೊಂಬು, ಕಹಳೆಗಳು ಅವರನ್ನು ಸ್ವಾಗತಿಸಿದವು. ಮಹಾಮುನಿ ದೇವ ಮರ್ಯಾದೆಯಿಂದ ಶ್ರೀರಾಮ ಸೀತೆ ಲಕ್ಷ್ಮಣರನ್ನು ಸಂತೋಷವಾಗಿ ಆಶ್ರಮ ತುಂಬಿಸಿಕೊಂಡರು.

ಶ್ರೀರಾಮ ನಿನ್ನ ದರ್ಶನದಿಂದ ಜನ್ಮಸಾರ್ಥಕವಾಗಿ, ಪುನೀತವಾಯಿತು. ಹಿಂದಿನ ಯುಗದಲ್ಲಿ ಶ್ರೀಮನ್ ನಾರಾಯಣನಾಗಿ ದರುಶನ ನೀಡಿದೆ. ಈ ಯುಗದಲ್ಲಿ ಶ್ರೀರಾಮನಾಗಿ ದರ್ಶನ ನೀಡಿ ನನ್ನನ್ನು ಪಾವನವಾಗಿಸಿದೆ, ನನಗೆ ಮೋಕ್ಷ ನೀಡು ತಂದೆ ಎಂದು ಭಿನ್ನವಿಸಿದರು. ತಾನು ಆಗಮಿಸಿದ ತೃಣಬಿಂದು ಮಹಾಮುನಿ ಆಶ್ರಮ

ನನ್ನ ಕ್ಷೇತ್ರವಾಗಿ ಪುಣ್ಯಸ್ಥಳವಾಗಲಿ, ಎಂದು ಹರಸಿದ. ನಾನು ಇಲ್ಲಿದ್ದ ಕುರುಹಾಗಿ ನನ್ನ ಮಂದಿರವಾಗಲಿ, ಎಂದು ಆಶೀರ್ವದಿಸಿದ. ಹೀಗೆ ಆ ಕ್ಷೇತ್ರದಲ್ಲಿ ಸುಂದರ ಕಾಡಿನ ಮಧ್ಯ ಮುಂದಿನ ನಿರ್ಮಾಣವಾಯಿತು ಎಂಬ ಪುರಾಣ ಕಥೆ ಇಂದಿಗೂ ಚಾಲ್ತಿಯಲ್ಲಿದೆ.

ಶ್ರೀರಾಮ ತನ್ನ ವನವಾಸದ ಸಮಯದಲ್ಲಿ ಈ ದಟ್ಟಾರಣ್ಯಕ್ಕೆ ಬಂದು ಚುಂಚ ಚುಂಚಿಯರ ಆತಿಥ್ಯ ಪಡೆದು ಆನಂದ ಹೊಂದಲು ಅವರಿಗೆ ಆಶೀರ್ವದಿಸಿ ತಾನು ತಂಗಿದ್ದ ಈ ಸ್ಥಳ ಮತ್ತು ತನ್ನನ್ನು ಆಧರಿಸಿದ ಚುಂಚ ಚುಂಚಿಯರಿಗೆ ಮುಕ್ತಿಯವರನ್ನು ನೀಡಿದನಲ್ಲದೆ, ಆ ಸ್ಥಳಕ್ಕೆ ಚುಂಚಾರಣ್ಯವೆಂದು ಕರೆದನು. ಹೀಗೆ ಚುಂಚಾರಣ್ಯವೆಂದು ಚಾಲ್ತಿಯಲ್ಲಿದ್ದ ಈ ಸ್ಥಳ ಕ್ರಮೇಣವಾಗಿ ಕಾಲಕಳೆದಂತೆ ಕಾಡು ನಾಶವಾಗಿ ನಾಡಾಗಿ ಮಾರ್ಪಟ್ಟಿತ್ತು. ಕಾವೇರಿ ನದಿಗೆ ಅಡ್ಡಲಾಗಿ ನಿರ್ಮಿಸಿದ ಸೇತುವೆಯ ಕಾರಣದಿಂದ ಅದನ್ನು ಕಟ್ಟೆ ಎಂದು ಕರೆದು ಮುಂದೆ ಚುಂಚನಕಟ್ಟೆ ಎಂದಾಯಿತು.

**ಶ್ರೀ ರಾಮದೇವಾಲಯದ ಪಕ್ಷಿನೋಟ**

ತ್ರೇತಾಯುಗದಷ್ಟು ಹಳೆಯದಾದ ಇತಿಹಾಸವನ್ನು ಹೊಂದಿದೆ ಎಂದು ತಿಳಿಯಲಾದ ಚುಂಚನಕಟ್ಟೆ ದೇವಾಲಯವೂ ಕಾವೇರಿ ನದಿಯ ಬಲದಂಡೆಯ ಮೇಲಿದೆ. ಇದು ಮುಜರಾಯಿ ಇಲಾಖೆಗೆ ಸೇರಿದ ದೇವಾಲಯವಾಗಿವೆ. ಕೇವಲ ಒಂದು ಚಿಕ್ಕ ಗುಡಿಯಂತಿದ್ದ ದೇವಸ್ಥಾನವನ್ನು ಒಂದು ದೊಡ್ಡ ಪ್ರಾಕಾರವಾಗಿ ಹೊಂದಿದೆ. ಇದರಲ್ಲಿ ಜೀರ್ಣೋದ್ಧಾರವೂ ೧೮೬೯ರಲ್ಲಿ ಪಾಳೇಗಾರ ಕುಪ್ಪರಾಯನ ಆಳ್ವಿಕೆಯಲ್ಲಿ ಬೃಹದಾಕಾರವಾಗಿ ಕಟ್ಟಲ್ಪಟ್ಟಿತು.

ದೇವಾಲಯವು ಪೂರ್ವಾಭಿಮುಖವಾದ ಬೃಹತ್ ದ್ವಾರವನ್ನು ಹೊಂದಿದ್ದು, ಪ್ರವೇಶ ದ್ವಾರದ ಎಡಬಲ ಗೋಡೆಗಳಲ್ಲಿ ನಾಗಬಂಧದ ಶಿಲಾಫಲಕಗಳಿವೆ. ದೇವಾಲಯದ ಸುತ್ತಲೂ ಅನೇಕ ಪುಟ್ಟ ಮಂಟಪಗಳಿದ್ದು, ದೇವಾಲಯದ ಎದುರು ಒಂದು ಸುಂದರವಾದ ಕಲ್ಯಾಣ ಮಂದಿರವೂ ಉಂಟು.

ನದಿಯಿಂದ ಸ್ನಾನ ಮಾಡಿ ಬರುವಾಗ "ಹನುಮನಗುಡಿ' ಸಿಗುತ್ತದೆ. ಅದಕ್ಕೆ ಮೊದಲು ಪೂಜೆ ಸಲ್ಲಿಸಿದ ನಂತರ ಭಕ್ತಾದಿಗಳು ರಾಮ ಮಂದಿರಕ್ಕೆ ಪೂಜೆಗೆ ಬರುತ್ತಾರೆ. ಇದರ ಬಗ್ಗೆ ಪುರಾಣ ಕಥೆಯೊಂದನ್ನು ಅಲ್ಲಿಯ ಜನ ಹೇಳುತ್ತಾರೆ. ಇತರೆಡೆಯ ಶ್ರೀರಾಮ ದೇವಾಲಯದಲ್ಲಿ ಸಾಮಾನ್ಯವಾಗಿ ಸಾಮಾನ್ಯವಾಗಿ ಕಂಡು ಬರುವಂತೆ, ರಾಮ, ಸೀತೆ, ಲಕ್ಷ್ಮಣರ ವಿಗ್ರಹ ಮುಂದೆ ಹನುಮಂತನ ವಿಗ್ರಹವಿರುವಂತೆ ಇಲ್ಲಿ ಇಲ್ಲ. ಆದ್ದರಿಂದ ಇದರ ಬಗ್ಗೆ ಬೇರೆ ವಿವರಣೆಯನ್ನು ಇಲ್ಲಿನ ಜನ ನೀಡುತ್ತಾರೆ.

ಅದರಂತೆ ರಾಮನ ಪರಮ ಭಕ್ತನಾದ ಹನುಮ ಬಂದು ರಾಮನ ಬಳಿ, ತನ್ನ ಪರಮ ಭಕ್ತನಾದ ನನ್ನನ್ನು ಬೇರ್ಪಡಿಸಿದ್ದಾರೆಂದು ಹೇಳಲಾಗಿ, ರಾಮನ ಭಕ್ತ ಹನುಮ, 'ನೀನು ಎಂದಿದ್ದರೂ ನನ್ನ ಪರಮ ಭಕ್ತನೇ, ಭಕ್ತ ಶ್ರೇಷ್ಠನಾದ ನಿನಗೆ ಮೊದಲ ಪೂಜೆ ಸಲ್ಲಲೆಂದು' ವರವನ್ನು ನೀಡುತ್ತಾನಂತೆ, ಆದ್ದರಿಂದ ನದಿಯ ದಂಡೆಯಲ್ಲಿ ಹನುಮಂತನ ಗುಡಿಯಿದೆ. ಅಲ್ಲಿಂದ ಮುಂದೆ ಬಂದರೆ ಶ್ರೀರಾಮ ದೇವಾಲಯ ಸಿಗುತ್ತದೆ.

ಪೂರ್ವಾಭಿಮುಖವಾದ ಬೃಹತ್ತಾದ ಗೋಪುರವನ್ನು ಹೊಂದಿರುವ ಪ್ರವೇಶ ದ್ವಾರದಿಂದ ಒಳ ಬಂದರೆ ಗೋಪುರ ಮಂಟಪ. ಅಲ್ಲಿ ವಿಶಾಲವಾದ ಜಗುಲಿಗಳಿದ್ದು, ಎಡ ಭಾಗದಲ್ಲಿ ಗಣೇಶನ ಸುಂದರ ಮೂರ್ತಿಯೊಂದು ಗೋಚರಿಸುತ್ತದೆ. ಅದನ್ನು ಹಾಯ್ದು ಒಳ ಬಂದರೆ ವಿಶಾಲವಾದ ಕಲ್ಲಿನ ಹಾಸನ್ನು ಉಳ್ಳ ವಿಶಾಲವಾದ ಪ್ರಾಂಗಣ ನಮ್ಮನ್ನು ಸ್ವಾಗತಿಸುತ್ತದೆ. ಗರ್ಭಗುಡಿಯ ಸುತ್ತ ಹರಡಿರುವ ಈ ಪ್ರಾಂಗಣದಲ್ಲಿ ಸಂಪಗೆ, ತೆಂಗು, ಬಿಲ್ವಪತ್ರೆ, ಮರಗಳು ಸುತ್ತಲೂ ಹರಡಿ ದೇವಾಲಯಕ್ಕೆ ಸುಂದರ ಪ್ರಕೃತಿಯನ್ನೊದಗಿಸಿವೆ.

ಈ ದೇವಾಲಯ ಸಾಮಾನ್ಯವಾಗಿದ್ದು, ಗರ್ಭಗುಡಿಯ ಮುಂಭಾಗದಲ್ಲಿ ಕಲ್ಲಿನ ಗರುಡಗಂಭ ಮತ್ತು ಪಂಚಲೋಹದಿಂದ ತಯಾರಾದ ಸುಂದರ ಕೆತ್ತನೆಯನ್ನುಳ್ಳ ಲೋಹದ ಧ್ವಜ ಸ್ತಂಭವಿದೆ. ಅದರ ಪಕ್ಕದಲ್ಲೇ ತುಳಸಿಕಟ್ಟೆಯಿದೆ. ಅದನ್ನು ಹಾಯ್ದು ಗರ್ಭಗುಡಿಯನ್ನು ಪ್ರವೇಶಿಸಿದರೆ ಶ್ರೀರಾಮ, ಸೀತೆ, ಲಕ್ಷ್ಮಣರ ವಿಗ್ರಹಗಳು ಗೋಚರಿಸುತ್ತವೆ. ಅದನ್ನು ಸೂಕ್ಷ್ಮವಾಗಿ ಗಮನಿಸಿದರೆ ನಮಗೊಂದು ಆಶ್ಚರ್ಯ ಕಾದಿರುತ್ತದೆ. ಮೊದಲಿಗೆ ಈ ವಿಗ್ರಹದ ಮುಂದೆ ಸಾಮಾನ್ಯವಾಗಿ ಕಂಡುಬರುವ ಹನುಮನ ವಿಗ್ರಹವಿಲ್ಲ ಎರಡನೇಯದಾಗಿ ಎಲ್ಲಾ ಕಡೆಯ ದೇವಾಲಯಗಳಲ್ಲಿ ಶ್ರೀರಾಮನ ಎಡಭಾಗದಲ್ಲಿ ಸೀತೆಕಂಡು ಬಂದರೆ, ಇಲ್ಲಿ ರಾಮನ ಬಲಭಾಗದಲ್ಲಿ ಸೀತೆ, ಎಡಭಾಗದಲ್ಲಿ ಲಕ್ಷ್ಮಣ ಕಂಡುಬರುತ್ತಾನೆ. ಇದು ಈ ದೇವಾಲಯದ ವೈಶಿಷ್ಟ್ಯವೂ ಹೌದು.

ಈ ಎರಡು ಕಾರಣಗಳಿಗೂ ಇಲ್ಲಿನ ಜನರಲ್ಲಿ ಸಿದ್ಧವಾದ ಪುರಾಣಕಥೆಯೊಂದು ಲಭ್ಯವಾಗುತ್ತದೆ. ಅದಕ್ಕೆ ಅವರು ಹೇಳುವ ಕಥೆಯೆಂದರೆ ಮೊದಲನೇಯದಾಗಿ ಹನುಮಂತನ ವಿಗ್ರಹವಿರದೇ ಇರಲು ಕಾರಣ, ಶ್ರೀರಾಮ ಸೀತೆ ಲಕ್ಷ್ಮಣರು ತಮ್ಮ ವನವಾಸ ಕಾಲದಲ್ಲಿ, ಈ ಸ್ಥಳಕ್ಕೆ ಆಗಮಿಸಿದಾಗ ಹನುಮಂತ ಇರಲಿಲ್ಲವಂತೆ ಆದ್ದರಿಂದ ಅವನ ವಿಗ್ರಹವನ್ನು ಅಲ್ಲಿ ಸ್ಥಾಪಿಸಲಾಗಿಲ್ಲವಂತೆ, ಹಿಂದೆ ಹೇಳಿದಂತೆ ರಾಮನ ವರದಿಂದ ಹನುಮನ ಗುಡಿ ನದಿಯ ದಂಡೆಯಲ್ಲೆ ನಿರ್ಮಾಣಗೊಂಡಿದೆ.

ಎರಡನೆಯದಾದ ವಿಶೇಷತೆಯನ್ನುಳ್ಳ ಸೀತಾದೇವಿ ರಾಮನ ಬಲಭಾಗದಲ್ಲಿರಲು ಕಾರಣವಾದ ಪುರಾಣಕಥೆ ಹಿಂದೆ ತಿಳಿಸಿದಂತೆ ತೃಣಬಿಂದು ಮಹಾಮುನಿಯ ತಪಸ್ಸಿಗೆ ಮೆಚ್ಚಿ ಅವನಿಗೆ ದರ್ಶನವನ್ನು ನೀಡಿದ ಶ್ರೀರಾಮ, ಸೀತೆ, ಲಕ್ಷ್ಮಣರು ಆ ಮುನಿಯ ಆಶ್ರಮದಲ್ಲೇ ಕೆಲವು ದಿನಗಳು ತಂಗಿದ್ದರು. ಈ ಮಧ್ಯೆ ಆ ಮಹಾಮುನಿ ರಾಮನಿಗೆ, 'ಶ್ರೀರಾಮ ನಾನು ತಮ್ಮ ವಿವಾಹಕ್ಕೆ ಆಗಮಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ ತಾವು ತಮ್ಮ ವಿವಾಹವಾಗುವ ಸುಂದರ ಸಂದರ್ಭದ ದರ್ಶನ ನೀಡಬೇಕೆಂದು' ಕೋರಿಕೊಂಡಾಗ, ರಾಮನು ಸೀತೆಯನ್ನು ವಿವಾಹವಾಗುವಂತೆ ದರ್ಶನ ನೀಡಲು ಸಜ್ಜಾಗುತ್ತಾನೆ. ಆದರೆ ಅವನಲ್ಲಿ ಆತಂಕವೊಂದು ಮನೆಮಾಡುತ್ತದೆ. ತಾನು ಏಕಪತ್ನಿ ವ್ರತಸ್ಥ, ಎಡದಲ್ಲಿ ಸೀತೆಯಿದ್ದರೆ, ಬಲಭಾಗದಲ್ಲಿ ಕಾವೇರಿ ಮಾತೆ ಇದ್ದಾಳೆ. ಆದ್ದರಿಂದ ರಾಮ ಯೋಚಿಸಿ, ಸೀತೆಯನ್ನು ಬಲಭಾಗದಲ್ಲಿ ಸಲ್ಲಿಸಿಕೊಂಡು, ವಿವಾಹದ ದರ್ಶನ ನೀಡುತ್ತಾನಂತೆ, ಆದ್ದರಿಂದ ಇಲ್ಲಿ ಸೀತೆಯು ರಾಮನ ಬಲಭಾಗದಲ್ಲಿರುವಂತೆ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ.

ಇದಲ್ಲದೆ ಇಲ್ಲಿನ ಮತ್ತೊಂದು ವೈಶಿಷ್ಟ್ಯವನ್ನು ಕಾಣಬಹುದು. ಗರ್ಭಗುಡಿಯ ಒಳಭಾಗದಲ್ಲಿ ನಿಂತರೆ ಕಾವೇರಿ ನದಿಯ ಬೋರ್ಗರೆತದ ಸದ್ದು ಸ್ವಲ್ಪವೂ ಕೇಳಿಸುವುದಿಲ್ಲ. ಇದಕ್ಕೆ ತಂತ್ರಜ್ಞರ ಶೈಲಿಯಿಂದ ಮೂಡಿದ ಕಟ್ಟಡ ನಿರ್ಮಾಣ ಒಂದಾದರೆ ಅದಕ್ಕೂ ಸಹ ಒಂದು ಪುರಾಣ ಕಥೆ ಇಲ್ಲಿ ಕಂಡುಬರುತ್ತದೆ. ರಾಮ ವಿವಾಹವಾಗುವಂತೆ ಮಹಾಮುನಿಗೆ ದರ್ಶನ ನೀಡುವಾಗ, ಕಾವೇರಿಯ ಬೋರ್ಗರೆತ ಅವನ ಏಕಾಗ್ರತೆಗೆ ಭಂಗ ತರುತ್ತದೆ. ಆಗ ಅವನು "ಕಾವೇರಿಮಾತೆ, ಏಕಿಷ್ಟು ವ್ಯಗ್ರಳಾಗಿರುವೆ, ಶಾಂತಳಾಗು, ನಿನ್ನ ಬೋರ್ಗರೆತ ಸದ್ದು ಈ ಸ್ಥಳಕ್ಕೆ ಕೇಳದಂತಾಗಲಿ" ಎಂದು ಶಾಪ ನೀಡುತ್ತಾನಂತೆ. ಇದನ್ನೆಲ್ಲಾ ನಂಬುವುದು ಕಷ್ಟವಾಗುತ್ತದೆ. ಆದರೂ ನಂಬಲೇಬೇಕಾದ ಸ್ಥಿತಿ. ಈ ಸ್ಥಳದಲ್ಲಿ ಸುಮಾರು ೧೨ ಅಡಿ ಎತ್ತರದಿಂದ ಧುಮುಕುವ ಕಾವೇರಿ ನದಿಯ ಬೋರ್ಗರೆತದ ಸದ್ದು ಸುತ್ತಾ ಎರಡು ಕಿಲೋಮೀಟರ್‌ವರೆಗೆ ಕೇಳುತ್ತದೆಯಾದರೂ ದಂಡೆಯಲ್ಲೇ ಇರುವ ಗರ್ಭಗುಡಿಯ ಒಳಗೆ ನಿಂತರೆ ಮಾತ್ರ ಕೇಳಿದುವುದಿಲ್ಲ.

ಹೀಗೆ ಹಲವು ವೈಶಿಷ್ಟ್ಯಗಳಿಂದ ಕೂಡಿದ ಗರ್ಭಗುಡಿಯ ಹೊರ ಭಾಗದಲ್ಲಿ ಸುಂದರವಾದ ಹಜಾರವೊಂದಿದೆ. ಅದು ಇತ್ತೀಚೆಗೆ 'ಗ್ರಾಫೈಟ್ ಇಂಡಿಯಾ ಪ್ರೈವೇಟ್ ಲಿಮಿಟೆಡ್' ಇವರ ಪ್ರಾಯೋಜಕತ್ವದಿಂದ ಟೈಲ್ಸ್‌ನಿಂದ ಕಂಗೊಳಿಸುತ್ತದೆ. ಅಲ್ಲಿಂದ ಹೊರಬಂದರೆ ಗರ್ಭಗುಡಿಯ ದ್ವಾರದ ಬಲಭಾಗದಲ್ಲಿ ಸ್ಥಳೀಯ ಮುಖಂಡರೆಂದು ತಿಳಿಯಲಾದ ಚುಂಚ-ಚುಂಚಿಯರ ಪುಟ್ಟ ವಿಗ್ರಹವೊಂದು ಕಾಣಿಸುತ್ತದೆ. ಇದಲ್ಲದೆ

ಗರ್ಭಗುಡಿಯ ಮೇಲೆ ಸುಂದರವಾದ ಗೋಪುರವಿದ್ದು, ಅದು ಹಲವು ವೈಶಿಷ್ಟ್ಯಪೂರ್ಣ ದೇವತೆಗಳಿಂದ ಮತ್ತು ಶ್ರೀರಾಮನ ದಶಾವತಾರಗಳನ್ನು ಪ್ರದರ್ಶಿಸುವ ವಿಗ್ರಹಗಳಿಂದ ಕೆತ್ತಲ್ಪಟ್ಟಿದೆ. ಗರ್ಭಗುಡಿಯ ಮುಂಭಾಗದ ಮೇಲ್ಛಾವಣಿಯಲ್ಲಿ ಶ್ರೀರಾಮ, ಸೀತೆ, ಮತ್ತು ಲಕ್ಷ್ಮಣರ ಏಕ ಶಿಲಾ ವಿಗ್ರಹ ಕಂಡುಬರುತ್ತದೆ. ಇವುಗಳಲ್ಲದೆ ಗರ್ಭಗುಡಿಯ ದ್ವಾರದ ಅಕ್ಕಪಕ್ಕದಲ್ಲಿ ದ್ವಾರಪಾಲಕರಾದ ಜಯ-ವಿಜಯರ ಮೂರ್ತಿ ಕೆತ್ತನೆ ಕಂಡುಬರುತ್ತದೆ.

ಇನ್ನು ದೇವಾಲಯದ ಒಳ ಪ್ರಾಂಗಣದಲ್ಲಿ ಬಲಭಾಗದಲ್ಲಿ ಆಳ್ವಾರ್ ಸನ್ನಿಧಿ ಎಂಬ ತಲೆಬರಹವುಳ್ಳ ಚಿಕ್ಕದೊಂದು ಗುಡಿ ಇದೆ. ಈ ಆಳ್ವಾರರು ವೈಷ್ಣವರ ಗುರು ಎಂದು ತಿಳಿಯಲಾಗಿದೆ. ಈ ಗುಡಿಯಲ್ಲಿ ಆಳ್ವಾರರ ಎರಡು ವಿಗ್ರಹಗಳಿವೆ. ಪ್ರಾಂಗಣದ ಎಡಭಾಗದಲ್ಲಿ ಯಾಗಶಾಲೆಯೊಂದು ಕಂಡುಬರುತ್ತದೆ. ಪ್ರಾಂಗಣದ ಬಲಭಾಗದಲ್ಲಿರುವ ಗೋಡೆಗಳ ಮೇಲೆ ಶ್ರೀರಾಮನ ದಶಾವತಾರದ ಚಿತ್ರಗಳನ್ನು ಬಿಡಿಸಲಾಗಿದೆ. ಅಲ್ಲದೆ, ಜಾತ್ರೆಯ ಕಾಲದಲ್ಲಿ ನಡೆಯುವ ಶ್ರೀರಾಮ ಕಲ್ಯಾಣೋತ್ಸವಕ್ಕೆಂದು ಸಣ್ಣ ಹಸೆ ಮಂಟಪವೊಂದನ್ನು ನಿರ್ಮಿಸಲಾಗಿದೆ.

**ಶ್ರೀ ರಾಮ ದೇವಾಲಯದ ಸಂಪ್ರದಾಯಗಳು**

ಚುಂಚನಕಟ್ಟೆಯ ಶ್ರೀರಾಮ ದೇವಾಲಯದಲ್ಲಿ ನಡೆಯುವ ಸಂಪ್ರದಾಯ ಆಚರಣೆಗಳೆಲ್ಲವೂ ವೈಷ್ಣವ ಸಂಪ್ರದಾಯಕ್ಕೆ ಒಳಪಟ್ಟಿದ್ದಾಗಿರುತ್ತದೆ. ಅದು ಪಾಂಚರಾತ್ರ ಆಗಮದಲ್ಲಿ ನಡೆಯುತ್ತದೆ. ಇಲ್ಲಿ ವೈಷ್ಣವರಿಗೆ ಮಾತ್ರ ಪೂಜೆ ಸಲ್ಲಿಸುವ ಅವಕಾಶವನ್ನು ನೀಡಲಾಗುತ್ತದೆ; ಮಿಕ್ಕವರಿಗೆ ಪ್ರವೇಶವಿಲ್ಲ.

ಶ್ರೀರಾಮ ಅಲಂಕಾರಪ್ರಿಯ ಅಂದರೆ ವಿಷ್ಣುವಿನ ಅವತಾರವಾದ ಶ್ರೀರಾಮನು ಅಲಂಕಾರ ಪ್ರಿಯನೆಂದು ನಂಬಿ ಶ್ರೀರಾಮ, ಸೀತೆ, ಲಕ್ಷ್ಮಣರ ಕೆತ್ತನೆಯನ್ನೊಳಗೊಂಡ ಏಕಶಿಲಾ ವಿಗ್ರಹವನ್ನು ಅರ್ಚಕರು ಪೂಜಾ ದಿನಗಳಲ್ಲಿ ತೊಳೆದು ಹೂವಿನಿಂದ ಸಿಂಗರಿಸಿ ಪೂಜಿಸುತ್ತಾರೆ. ಶಿವನು ಅಭಿಷೇಕ ಪ್ರಿಯನಾದಂತೆ, ವಿಷ್ಣು ಅಲಂಕಾರಪ್ರಿಯ, ಶಿವನಿಗೆ ಅಭಿಷೇಕ ಜಾಸ್ತಿಯಾಗಿರುತ್ತದೆ. ಅಲಂಕಾರ ಕಡಿಮೆ. ಆದರೆ ವಿಷ್ಣುವಿಗೆ ಅಲಂಕಾರಗಳು ಜಾಸ್ತಿ, ಅಭಿಷೇಕ ಕಡಿಮೆ, ವಾರಕ್ಕೊಮ್ಮೆ ಅಥವಾ ವಿಶೇಷ ದಿನಗಳಲ್ಲಿ ಮಾತ್ರ ಇಲ್ಲಿ ಶ್ರೀರಾಮನಿಗೆ ಅಭಿಷೇಕವನ್ನು ಮಾಡಲಾಗುತ್ತದೆ.

ಇಲ್ಲಿನ ಶ್ರೀರಾಮ ದೇವಾಲಯದಲ್ಲಿ ವಿಶೇಷವಾಗಿ ಶನಿವಾರ ಹಾಗೂ ನವರಾತ್ರಿ, ರಾಮನವಮಿ ಮತ್ತು ಜಾತ್ರಾ ಸಮಯದಲ್ಲಿ ಪೂಜೆ ನಡೆಯುತ್ತದೆ. ಪ್ರತಿ ಶನಿವಾರ ವಿಗ್ರಹಕ್ಕೆ ಅಭಿಷೇಕ ಮಾಡಿ, ಹೂವಿನಿಂದ ಅಲಂಕರಿಸಿ, ಸಂಪ್ರದಾಯಬದ್ಧವಾಗಿ ಪೂಜಾ

ವಿಧಿಯನ್ನು ನೆರವೇರಿಸಲಾಗುತ್ತದೆ. ಪೂಜೆ ಮುಗಿದ ನಂತರ ಬಂದ ಭಕ್ತಾದಿಗಳೆಲ್ಲರಿಗೂ ಮೊಸರನ್ನ ಪ್ರಸಾದ ಮತ್ತು ಸಿಹಿ ಪೊಂಗಲನ್ನು ಬೆಳಗಿನ ಸಮಯ ನೀಡಲಾಗುತ್ತದೆ.

ಸುತ್ತಮುತ್ತಲಿನ ಗ್ರಾಮದ ಜನರು ತಮ್ಮ ನಂಬುಗೆಗಳಿಗೆ ಅನುಸಾರವಾಗಿ ರಾಮನಲ್ಲಿ ಹರಕೆ ಕಟ್ಟಿಕೊಳ್ಳುತ್ತಾರೆ. ತಮ್ಮ ಬೇಡಿಕೆ ಈಡೇರಿದರೆ ಹರಕೆ ಸಲ್ಲಿಸುವುದಾಗಿ ಹೇಳಿಕೊಂಡು ಸೇವೆಯನ್ನು ಸಲ್ಲಿಸುತ್ತಾರೆ. ಜನರು ತಮ್ಮ ಬೇಡಿಕೆ ಈಡೇರಿದರೆ ರಾಮನಿಗೆ ಅಭಿಷೇಕ ಮಾಡಿಸಿ ಬಂದ ಭಕ್ತರಿಗೆ ಪ್ರಸಾವನ್ನು ಹಂಚುತ್ತಾರೆ. ಇತ್ತೀಚಿನ ದಿನಗಳಲ್ಲಿ ಈ ದೇವಾಲಯದಲ್ಲಿ ಹರಕೆ ನೆಪದಲ್ಲಿ ಪ್ರಾಣಿ ಬಲಿ ಪ್ರಾರಂಭವಾಗಿದೆ. ಹರಕೆ ಸಲ್ಲಿಸಲು ಭಕ್ತರು ಕುರಿ, ಕೋಳಿ ಇತ್ಯಾದಿ ಪ್ರಾಣಿಗಳನ್ನು ಬಲಿಕೊಟ್ಟು ಅಲ್ಲೇ ಅದನ್ನು ಬೇಯಿಸಿ ನಾಲ್ಕು ಜನಕೆ ಕರೆದು ಊಟ ಹಾಕುತ್ತಾರೆ. ಇದರ ಬಗ್ಗೆ ಇಲ್ಲಿನ ಅರ್ಚಕರನ್ನು ವಿಚಾರಿಸಿದರೆ, 'ರಾಮ ಅಹಿಂಸಾಪ್ರಿಯ, ಆತನಿಗೆ ಪ್ರಾಣಿಬಲಿ ಇಷ್ಟವಿಲ್ಲ, ಆದರೆ ಜನ ತಮ್ಮ ನಂಬುಗೆಗಳಿಗನುಸಾರವಾಗಿ ತಮ್ಮ ಬಯಕೆ ಈಡೇರಿದಾಗ ಪ್ರಾಣಿ ಬಲಿ ನೀಡುತ್ತಾರೆ' ಎಂದು ವಿವರಿಸುತ್ತಾರೆ.

ಈ ದೇವಾಲಯದಲ್ಲಿ ವಿಶೇಷವಾಗಿ ಹಬ್ಬ ಹರಿದಿನಗಳಲ್ಲಿ, ಪ್ರಮುಖವಾಗಿ ಶ್ರಾವಣಮಾಸದಲ್ಲಿ ಜಾತ್ರೆಯ ಸಮಯದಲ್ಲಿ, ವಿಜಯದಶಮಿಯ ಸಮಯದಲ್ಲಿ ವಿಶೇಷ ಪೂಜೆ ನಡೆಯುತ್ತದೆ.

ಈ ದೇವರ ಒಂದು ವೈಶಿಷ್ಟ್ಯವೆಂದರೆ ಪ್ರಸಾದ ಕೊಡುವದು. ಪ್ರತಿದಿನ ಪೂಜಾರಿ ದೇವರ ವಿಗ್ರಹವನ್ನು ತೊಳೆದು, ಕುಂಕುಮ, ಗಂಧ, ಬಿಡಿಹೂಗಳನ್ನು ದೇವರಿಗೆ ಮುಡಿಸುತ್ತಾನೆ. ಪೂಜಾರಿ ಪೂಜೆ ಮಾಡಿ ಭಕ್ತಾದಿಗಳಿಗೆ ತೀರ್ಥವನ್ನು, ಮಂಗಳಾರತಿಯನ್ನು ನೀಡಿದ ಮೇಲೆ ಪ್ರಸಾದವನ್ನು ಸ್ವೀಕರಿಸಲು ಆಹ್ವಾನಿಸುತ್ತಾರೆ. ಜನರು ತಮಗೆ ಕಷ್ಟ ಬಂದಾಗ ಅಥವಾ ತಮ್ಮ ಕೆಲಸಗಳು ನೆರವೇರುತ್ತವೋ? ಇಲ್ಲವೋ? ಎಂದು ತಿಳಿಯಲು ದೇವರ ಬಳಿ ಪ್ರಸಾದ ಬೇಡುತ್ತಾರೆ.

ದೇವರಿಗೆ ಮುಡಿಸಿದ ಹೂಗಳು ಬಲಗಡೆ ಬಿದ್ದರೆ ಕೆಲಸ ನೆರವೇರುವುದೆಂದೂ, ಕಷ್ಟ ಪರಿಹಾರವಾಗುವುದೆಂದೂ, ಭಾವಿಸುತ್ತಾರೆ. ಎಡಗಡೆ ಬಿದ್ದರೆ ಕೆಲಸ ನೆರವೇರುವುದಿಲ್ಲವೆಂದು ತಿಳಿದು ಅದನ್ನು ನಂಬುತ್ತಾರೆ. ಇದರ ಬಗ್ಗೆ ಇಂದಿಗೂ ಜನರಲ್ಲಿ ಅಚಲವಾದ ನಂಬಿಕೆ ಇರುವುದನ್ನು ನಾವು ಕಾಣಬಹುದಾಗಿದೆ.

ಈ ಎಲ್ಲಾ ಹಿನ್ನೆಲೆಯಿಂದ ಶ್ರೀರಾಮ ದೇವಾಲಯವು ವಿಶಿಷ್ಟ ಆಚರಣೆ ಮತ್ತು ಸಂಪ್ರದಾಯದಿಂದ ಕೂಡಿ ಸುತ್ತಮುತ್ತಲ ಜನರ ಧಾರ್ಮಿಕ ಕೇಂದ್ರವಾಗಿದೆ ಎನ್ನಬಹುದು.

## ಶ್ರೀರಾಮ ದೇವಾಲಯದ ವೈಶಿಷ್ಟ್ಯಗಳು

ಚುಂಚನಕಟ್ಟೆಯ ಶ್ರೀರಾಮ ದೇವಾಲಯವು ಮಿಕ್ಕ ಕಡೆಗಳಲ್ಲಿ ರಾಮ ದೇವಾಲಯಗಳಿಗಿಂತ ಮತ್ತು ಇತರ ಪ್ರದೇಶದ ಇತರ ದೇವಾಲಯಗಳಿಗಿಂತ ಹಲವು ಅಂಶಗಳಲ್ಲಿ ಭಿನ್ನತೆಯನ್ನು ಹೊಂದಿದ್ದು ವೈಶಿಷ್ಟ್ಯಪೂರ್ಣವಾಗಿದೆ.

ಮೊದಲನೆಯದಾಗಿ, ಈ ದೇವಾಲಯದ ಪ್ರಮುಖ ಆಕರ್ಷಣೆಯೆಂದರೆ ಮಿಕ್ಕ ಶ್ರೀರಾಮ ದೇವಾಲಯಗಳಲ್ಲಿ ಸಾಮಾನ್ಯವಾಗಿ ರಾಮನ ಎಡಭಾಗದಲ್ಲಿ ಸೀತೆ, ಬಲಭಾಗದಲ್ಲಿ ಲಕ್ಷ್ಮಣ ಇದ್ದರೆ, ಇಲ್ಲಿನ ದೇವಾಲಯದಲ್ಲಿ ಸೀತಾದೇವಿಯು ಶ್ರೀರಾಮನ ಬಲ ಭಾಗದಲ್ಲಿದ್ದು, ಲಕ್ಷ್ಮಣ ಎಡ ಭಾಗದಲ್ಲಿದ್ದಾನೆ. ಈ ವಿಶಿಷ್ಟ್ಯೆಯನ್ನು ರಾಜ್ಯದ ಶ್ರೀರಾಮ ದೇವಾಲಯಗಳಲ್ಲಿನ ಚಿಕ್ಕಮಂಗಳೂರು ಜಿಲ್ಲೆಯ ಹೀರೆಮಗಳೂರು ಮತ್ತು ಚುಂಚನಕಟ್ಟೆಯ ಶ್ರೀರಾಮ, ದೇವಾಲಯಗಳಲ್ಲಿ ಮಾತ್ರ ಕಾಣಬಹುದಾಗಿದೆ.

ಎರಡನೆಯದಾಗಿ ಎಲ್ಲಾ ಕಡೆಗಳಲ್ಲಿ ಸಾಮಾನ್ಯವಾಗಿ ಶ್ರೀರಾಮ, ಸೀತೆ, ಲಕ್ಷ್ಮಣರೊಂದಿಗೆ, ಹನುಮಂತನು ಸಾಮಾನ್ಯವಾಗಿರುತ್ತಾನೆ. ಆದರೆ ಈ ದೇವಾಲಯಗಳಲ್ಲಿ ಹನುಮಂತ ರಾಮನ ಮುಂದೆ ಕಂಡುಬರುವುದಿಲ್ಲ. ಇವೆರಡೂ ವೈಶಿಷ್ಟ್ಯತೆಗಳಿಗೂ ಜನರಲ್ಲಿ ಪುರಾಣ ಕಥೆಯೊಂದು ರೂಢಿಯಲ್ಲಿದೆ. ಅದನ್ನು ಹಿಂದೆಯೇ ವಿವರಿಸಲಾಗಿದೆ.

ಮೂರನೆಯದಾಗಿ ದೇವಾಲಯದ ಪಕ್ಕದಲ್ಲಿ ಸುಮಾರು ೨೦ ಅಡಿಗಳ ಎತ್ತರದಿಂದ ಧುಮುಕುವ ಕಾವೇರಿ ನದಿಯ ಬೋರ್ಗರೆತದ ಶಬ್ದ ಸುತ್ತಮುತ್ತ ಮೂರು ಕಿಲೋಮೀಟರ್‌ಗಳ ವ್ಯಾಪ್ತಿಯನ್ನು ಹರಡುತ್ತದೆ. ಆದರೆ ಪಕ್ಕದಲ್ಲೇ ಇರುವ ದೇವಾಲಯದ ಗರ್ಭಗುಡಿಯೊಳಗೆ ನಿಂತರೆ ಬೋರ್ಗರೆತದ ಶಬ್ದ ಕೇಳಿಸುವುದಿಲ್ಲ.

ಹೀಗೆ ಈ ದೇವಾಲಯ ಮಿಕ್ಕ ದೇವಾಲಯಗಳಿಗಿಂತ ಹಲವು ಅಂಶಗಳಲ್ಲಿ ಭಿನ್ನತೆಯನ್ನು ಹೊಂದಿದ್ದು, ನಾಡಿನಲ್ಲೇ ವೈಶಿಷ್ಟ್ಯಪೂರ್ಣವಾದ ದೇವಾಲಯವಾಗಿದೆ.

## ಶ್ರೀರಾಮ ದೇವಾಲಯದ ಜಾತ್ರಾ ಮಹೋತ್ಸವ

ಚುಂಚನಕಟ್ಟೆಯ ಹೆಸರು ಕೇಳಿದೊಡನೆ ನಮಗೆ ಆ ಸುಂದರ ತಾಣದಲ್ಲಿ ನಡೆಯುವ ಜಾತ್ರಾಮಹೋತ್ಸವದ ಚಿತ್ರಣ ಕಣ್ಣಮುಂದೆ ಬಂದು ನಿಲ್ಲುತ್ತದೆ. ಏಕೆಂದರೆ ಈ ಜಾತ್ರೆಯೂ ರಾಜ್ಯದಲ್ಲಿ ನಡೆಯುವ ಜಾತ್ರೆಗಳಲ್ಲೆಲ್ಲಾ ಪ್ರಮುಖವಾದ ಹಾಗೂ ವಿಶಿಷ್ಟವಾದ ಸ್ಥಾನವುಳ್ಳದ್ದಾಗಿದೆ. ಅಲ್ಲದೇ ಆ ಜಾತ್ರೆಯ ವೈಶಿಷ್ಟ್ಯಗಳು ಜನರ ಆಕರ್ಷಣೆಗಳಲ್ಲಿ ಪ್ರಮುಖವಾದವುಗಳಾಗಿವೆ.

ಹಿಂದೆ ವಿವರಿಸಿದಂತೆ 'ಯಾತ್ರಾ' ಎಂಬ ಪದದ ಮೂಲದಿಂದ 'ಜಾತ್ರೆ' ಎಂಬುದು ಬಂದಿದೆ. ಎಂದು ತಿಳಿಯಬಹುದು. ಹಾಗಾಗಿ ಯಾತ್ರೆಯ ಸ್ಥಳಗಳೆಲ್ಲಾ ಸಾಮಾನ್ಯವಾಗಿ ಜಾತ್ರೆಯ ಸ್ಥಳಗಳೂ ಆಗಿರುತ್ತವೆ. ಈ ಮಾತು ಕೆಲವೇ ಯಾತ್ರಾ ಸ್ಥಳಗಳಿಗೆ ಮಾತ್ರ ಸಂಬಂಧಿಸಿದ್ದು ಎಂಬುದನ್ನು ಲಕ್ಷಿಸಬೇಕು.

ರಾಜ್ಯದ ಪ್ರಮುಖ ಯಾತ್ರಾ ಸ್ಥಳಗಳಲ್ಲಿ ಒಂದಾದ ಚುಂಚನಕಟ್ಟೆಯ ಜಾತ್ರೆಯೂ ಪ್ರಮುಖವಾದುದಾಗಿದೆ. ಆ ಜಾತ್ರೆಯ ಬಗ್ಗೆ ಕೆಲವು ಅಂಶಗಳನ್ನು ಮತ್ತು ಆ ಜಾತ್ರೆಯಲ್ಲಿ ನಡೆಯುವ ವಿಧಿ ವಿಧಾನಗಳನ್ನು ಈ ಅಧ್ಯಾಯದಲ್ಲಿ ನೋಡಬಹುದು.

ಸಾಮಾನ್ಯವಾಗಿ ದೇವಾಲಯಗಳ ಇತಿಹಾಸದೊಡನೆ ಜಾತ್ರೆಗಳ ಇತಿಹಾಸವನ್ನು ಗುಂಟುಹಾಕುವುದೆಂಟು. ವೇದಗಳ ಕಾಲದಲ್ಲಿ ದೇವಾಲಯಗಳಿರಲಿಲ್ಲವೆಂದು ದಾಖಲಾಗಿದ್ದರೂ ದೇವಾಲಯಗಳಿರಲಿಲ್ಲವೆಂದೂ ಜಾತ್ರೆಗಳಿರಲಿಲ್ಲವೆಂದು ಹೇಳುವುದು ಕಷ್ಟ. ಮಾರಿಮಸಣೆಯರು ಮುಂತಾದ ಗ್ರಾಮದೇವತೆಗಳಿಗೆ ಸಾಮಾನ್ಯವಾಗಿ ಗುಡಿ-ಕಟ್ಟುತ್ತಿರಲಿಲ್ಲ. ಗುಡಿಗಳಿದ್ದರೂ ಅವು ಈಚಿನವುಗಳಾಗಿವೆ. ವೇದ ಪೂರ್ವಕಾಲ-ದಿಂದಲೂ ಅವುಗಳ ಪೂಜೆಯ ಜತೆ ಜತೆಗೆ ಅವುಗಳಿಗೆ ಸಂಬಂಧಿಸಿದ ಜಾತ್ರೆಗಳೂ ಅವಿರತವಾಗಿ ನಡೆಯುತ್ತಿದ್ದಿರಬೇಕು. ಆದ್ದರಿಂದ ಜಾತ್ರೆಗಳು ಮೊದಮೊದಲು ಗ್ರಾಮದೇವತೆಗಳ ಸುತ್ತ ಹೆಣೆದುಕೊಂಡಿದ್ದು. ಕೊನೆಕೊನೆಗೆ ನಗರದೇವತೆಗಳ ಕಷೆಯೊಳಗೂ ವ್ಯಾಪಿಸಿಕೊಂಡಿರಬೇಕೆಂದು ತೋರುತ್ತದೆ.

ಸಾಮಾನ್ಯವಾಗಿ ಎಲ್ಲಾ ಜಾತ್ರೆಗಳೂ ಯಾವುದಾದರೊಂದು ದೇವರ ಹೆಸರಿನಲ್ಲಿ ಅಥವಾ ಊರಿನ ಆಶ್ರಯದಲ್ಲಿ ನಡೆಯುತ್ತವೆ ಎಂಬುದನ್ನು ತಿಳಿದಿದ್ದೇವೆ. ಹಾಗೆಯೇ ಚುಂಚನಕಟ್ಟೆಯ ಜಾತ್ರೆ ಶ್ರೀರಾಮನ ಹೆಸರಿನಲ್ಲಿ ನಡೆಯುತ್ತದೆ. ಶ್ರೀರಾಮ ದೇವಾಲಯದ ಬಗ್ಗೆ ಹಿಂದೆ ತಿಳಿಸಿದಂತೆ ಹಲವು ಐತಿಹ್ಯಗಳೂ, ಪುರಾಣಗಳೂ ಜನರ ನಂಬಿಕೆಯಲ್ಲಿವೆ. ಅಂತೆಯೇ ಇಲ್ಲಿ ನಡೆಯುವ ಜಾತ್ರೆಗೂ ತನ್ನದೇ ಆದ ಇತಿಹಾಸವಿದೆಯಾದರೂ ಅದಕ್ಕೆ ನಿರ್ದಿಷ್ಟವಾದ ನಂಬಲರ್ಹವಾದ ಆಧಾರಗಳಿಲ್ಲ. ಹಾಗಾಗಿ ಈಗ ತಿಳಿದಿರುವ ಮಟ್ಟಿಗೆ ಮೈಸೂರು ಅರಸರಾದ ಚಿಕ್ಕದೇವರಾಯ ಒಡೆಯರ ಆಳ್ವಿಕೆಯ ಕಾಲದಲ್ಲಿ ಜಾತ್ರೆ ಆರಂಭವಾಗಿರಬಹುದೆಂದು ಊಹಿಸಬಹುದು.

ಕೃಷ್ಣರಾಜನಗರದಿಂದ ಸುಮಾರು ೧೨ ಕಿ.ಮೀ.ಅಂತರದಲ್ಲಿರುವ ಚುಂಚನ-ಕಟ್ಟೆಯ ಕಾವೇರಿ ತೀರದಲ್ಲಿನ ಶ್ರೀರಾಮದೇವರ ಹೆಸರಿನಲ್ಲಿ ಈ ಜಾತ್ರೆ ನಡೆಯುತ್ತದೆ. ಚುಂಚನಕಟ್ಟೆಯ ಸುತ್ತಲೂ ಹಸಿರಿನಿಂದ ಕಂಗೊಳಿಸುವ ತೆಂಗು, ಬಾಳೆ ತೋಟಗಳೂ, ಕಬ್ಬಿನ ಗದ್ದೆ ಒಂದು ಕಡೆಯಿದ್ದರೆ, ಕಾವೇರಿ ಹೊಳೆಯ ಸುಂದರ ನೋಟ ಮತ್ತೊಂದು

ಕಡೆಗಿದೆ. ಅಲ್ಲದೆ ಸುತ್ತಲೂ ಸುಂದರವಾದ ಗಿಡ ಮರಗಳಿಂದ ಕೂಡಿದ ಶಾಂತ ವಾತಾವರಣವಿದ್ದು, ಪ್ರಕೃತಿ ಸೌಂದರ್ಯಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ಪ್ರಕೃತಿ ಸೌಂದರ್ಯದ ನೆಲೆಯಾಗಿರುವಂತೆ ಕಲೆಯ ಬಲೆಯೂ ಈ ಸ್ಥಳದಲ್ಲಿ ಹರಡಿಕೊಂಡಿದೆ.

ಇಂತಹ ವೈಭವೋಪೇತವಾದ ನೆಲದಲ್ಲಿ ವರ್ಷಕ್ಕೊಮ್ಮೆ ನಡೆಯುವ ಶ್ರೀರಾಮ ಜಾತ್ರೆಯೂ ಸುತ್ತಮುತ್ತಲ ಪ್ರದೇಶದ ಜನರಿಗೊಂದು ವಿಶಿಷ್ಟವಾದ ಹಬ್ಬವೂ ಆಗಿದೆ.

ವರ್ಷಂಪ್ರತಿ ಜನವರಿ ತಿಂಗಳಲ್ಲಿ ಹನ್ನೆರಡು ದಿನಗಳ ಕಾಲ ನಡೆಯುವ ಅದ್ದೂರಿ ಜಾತ್ರೆ ಇದಾಗಿದೆ. ಈ ಜಾತ್ರೆಯು ರಥೋತ್ಸವದ ಏಳು ದಿನಗಳ ಮುಂಚೆ ಆರಂಭವಾಗುತ್ತದೆ. ಈ ಜಾತ್ರೆಯೂ ಚುಂಚನಕಟ್ಟೆಯು ಸೇರಿದಂತೆ ಸುತ್ತಮುತ್ತಲ ಗ್ರಾಮಗಳ ಜನರ ಸಹಕಾರದೊಂದಿಗೆ ನಡೆಯುತ್ತದೆ. ಅಲ್ಲದೆ ತಾಲ್ಲೂಕಿನ ತಹಸೀಲ್ದಾರ್‌ರವರ ನೇತೃತ್ವವನ್ನು ಹೊಂದಿದ ಧರ್ಮದರ್ಶಿ ಮಂಡಲಿಯು ಇದರ ಎಲ್ಲಾ ಜವಾಬ್ದಾರಿಯನ್ನು ನಿಭಾಯಿಸುತ್ತದೆ. ಈ ಜಾತ್ರೆಯೂ ದನಗಳ ಜಾತ್ರೆಯಾಗಿದ್ದು, ಕರ್ನಾಟಕದಲ್ಲಿ ನಡೆಯುವ ದನಗಳ ಜಾತ್ರೆಗಳಲ್ಲಿ ಎರಡನೇ ಸ್ಥಾನವನ್ನು ಇದು ಪಡೆದುಕೊಂಡಿದೆ. ಈ ಸಂದರ್ಭದಲ್ಲಿ ಸೇರುವ ದನಗಳ ಪರಿಷೆಗೆ ನೂರಾರು ಮೈಲಿಗಳಿಂದ ದನಗಳು ಬರುತ್ತವೆ. 'ಹಳ್ಳಿಕಾರು' ಜಾತಿಯ ಹೋರಿಗಳಿಗೆ ಈ ಜಾತ್ರೆ ಪ್ರಸಿದ್ಧವಾಗಿದೆ. ಈ ಜಾತ್ರೆಗೆ ಸುಮಾರು ಎರಡು ಲಕ್ಷ ಜನರು ಸೇರುತ್ತಾರೆ.

**ಜಾತ್ರೆಯ ಪ್ರಾರಂಭ**

ಚುಂಚನಕಟ್ಟೆ ಶ್ರೀರಾಮ ಜಾತ್ರಾಮಹೋತ್ಸವವೂ ಪ್ರತೀ ವರ್ಷದ ಜನವರಿ ತಿಂಗಳಲ್ಲಿ ಸಾಮಾನ್ಯವಾಗಿ ನಡೆಯುತ್ತದೆ. ಈ ಜಾತ್ರೆಯೂ ಹಿಂದೆ ಹೇಳಿದಂತೆ ೧೨ ದಿನಗಳ ಕಾಲ ನಡೆಯುವ ಬೃಹತ್ ದನಗಳ ಜಾತ್ರೆಯಾಗಿದೆ.

ಶ್ರೀರಾಮದೇವರ ಸನ್ನಿಧಿಯಲ್ಲಿ ಕಾವೇರಿ ನದಿಯ ದಡದಲ್ಲಿ ಜರುಗುವ ಈ ಜಾತ್ರೆಯು ಪುಷ್ಯಶುದ್ಧ ಸಪ್ತಮಿಯಂದು ಸಾಮಾನ್ಯವಾಗಿ ಪ್ರಾರಂಭವಾಗುತ್ತದೆ.

ಜಾತ್ರೆಯು ಆರಂಭವಾಗುವ ಮುಂಚೆ ಶ್ರೀರಾಮನ ಸನ್ನಿಧಿಯಲ್ಲಿ ಹೋಮವನ್ನು ಮಾಡಲಾಗುತ್ತದೆ. ಅನಂತರ ಶ್ರೀರಾಮನಿಗೆ ಅಭಿಷೇಕ ಮಾಡಿ, ಶಾಸ್ತ್ರೋಕ್ತವಾಗಿ ಪೂಜಿಸುತ್ತಾರೆ. ಇವಿಷ್ಟು ಬೆಳಗಿನ ಸಮಯ ನಡೆಯುತ್ತದೆ. ಸಂಜೆ ದೇವಾಲಯದಲ್ಲಿ

ಪೂಜಿಸುವಂತಹ ಅರ್ಚಕರಿಗೆ ಮತ್ತು ದೇವಾಲಯದ ಪೂಜೆಯಲ್ಲಿ ಭಾಗಿಯಾಗುವವರಿಗೆ ಅಂಕುರ ಅಂದರೆ ಕಂಕಣವನ್ನು ಕಟ್ಟಲಾಗುತ್ತದೆ. ಅವರು ತನು, ಮನ ಶುದ್ಧಿಯಿಂದ ಪೂಜೆ ಸಲ್ಲಿಸುವುದಾಗಿ ಪ್ರತಿಜ್ಞೆ ಮಾಡಿ ಕಂಕಣಧಾರಿಗಳಾಗುತ್ತಾರೆ.

ಅನಂತರ ಗರ್ಭಗುಡಿಯ ಮುಂಭಾಗದಲ್ಲಿರುವ ಗರುಡಗಂಭಕ್ಕೆ ಪೂಜೆ ಸಲ್ಲಿಸಿ ಗರುಡನ ಚಿತ್ರವುಳ್ಳ ಒಂದು ಬಾವುಟವನ್ನು ಪೂಜಿಸಿ ಹಾರಿಸುತ್ತಾರೆ, ಅಲ್ಲಿಗೆ ಜಾತ್ರೆ ಸಾಂಪ್ರದಾಯಿಕವಾಗಿ ಪ್ರಾರಂಭವಾಗುತ್ತದೆ. ಈ ಗರುಡಧ್ವಜಾರೋಹಣ ಜಾತ್ರೆಯ ಆರಂಭವನ್ನು ಸೂಚಿಸುತ್ತದೆ. ಇವಿಷ್ಟು ಜಾತ್ರೆ ಪ್ರಾರಂಭದ ಮೊದಲ ದಿನ ನಡೆಯುವ ಆಚರಣೆಗಳಾಗಿವೆ.

ಜಾತ್ರೆ ಆರಂಭವಾಗುವುದಕ್ಕೆ ಎರಡು ಮೂರು ದಿನಗಳಿರುವಾಗಲೇ ನೂರಾರು ಮೈಲಿ ದೂರದಿಂದ ಜನರು ತಮ್ಮ ದನಗಳೊಂದಿಗೆ ಆಗಮಿಸಿ ಇಲ್ಲಿ ತಂಗಿರುತ್ತಾರೆ. ಗರುಡಧ್ವಜಾರೋಹಣ, ನಂತರ ಜಾತ್ರೆ ಆರಂಭವಾಗಿ ದನಗಳ ವಹಿವಾಟು ಸಹ ಚಾಲನೆಗೊಳ್ಳುತ್ತದೆ.

**ಶ್ರೀರಾಮ ಜಾತ್ರೆಯ ವಿಧಿ-ವಿಧಾನಗಳು**

ಯಾವುದೇ ಜಾತ್ರೆ ಹಬ್ಬಹರಿದಿನಗಳನ್ನು ಮಾಡಬೇಕಾದರೂ ಪ್ರಾಚೀನ ಕಾಲದಿಂದಲೂ ಕೆಲವು ವಿಧಿ ವಿಧಾನಗಳನ್ನು ಅನುಸರಿಸುತ್ತಾ ಬಂದಿದ್ದಾರೆ. ಜಾತ್ರೆ ಹಬ್ಬಗಳನ್ನು ಮಾಡಬೇಕಾದರೆ ಯಾವ ದಿವಸ ಯಾವ ಪೂಜೆ ಪುನಸ್ಕಾರಗಳನ್ನು ಮಾಡಬೇಕು ಎಂಬುದು ಹಿಂದಿನ ಕಾಲದಿಂದ ನಡೆದುಕೊಂಡು ಬಂದಿರುವ ಪದ್ಧತಿಯಾಗಿದೆ.

ಹಿಂದಿನಿಂದ ನಡೆದುಬಂದ ಸಂಪ್ರದಾಯದಂತೆ ಜಾತ್ರೆಯ ಮೊದಲದಿನ ಹೋಮ-ಹವನ, ಶ್ರೀರಾಮದೇವರಿಗೆ ಅಭಿಷೇಕ, ಅಂಕುರಾರ್ಪಣ, ಮೃತ್ತಿಕಾ ಸಂಗ್ರಹಣಾ, ಗರುಡ ಪ್ರತಿಷ್ಠೆ, ಇವಿಷ್ಟು ಆಚರಣೆಗಳಲ್ಲಿ ನಡೆದು ಜಾತ್ರೆ ಪ್ರಾರಂಭವಾಗುತ್ತದೆ. ಈ ಎಲ್ಲಾ ಆಚರಣೆಗಳಲ್ಲಿ ಸುತ್ತಲ ಗ್ರಾಮಗಳ ಮುಖಂಡರು, ಸ್ಥಳೀಯರು ಪಾಲ್ಗೊಳ್ಳುತ್ತಾರೆ.

ಜಾತ್ರೆಯ ಎರಡನೇ ದಿನ ಅಂದರೆ ಪುಷ್ಯ ಶುದ್ಧ ಅಷ್ಟಮಿಯಂದು ಧ್ವಜಾರೋಹಣ, ಭೇರಿತಾಡನ ಮತ್ತು ಹಂಸವಾಹನೋತ್ಸವ ಕಾರ್ಯಗಳು ಜರುಗುತ್ತವೆ. ಧ್ವಜಾರೋಹಣ ಅಂದರೆ ಜಾತ್ರೆ ಪ್ರಾರಂಭವಾದ ದಿನದಿಂದ ಮುಗಿಯುವವರೆಗೆ ದೇವಸ್ಥಾನದ ಒಳಾಂಗಣದಲ್ಲಿ ಯಜ್ಞ ನಡೆಯುತ್ತದೆ. ಇದು ಮುಂಜಾನೆಯ ವೇಳೆ ನಡೆಯುತ್ತದೆ. ಈ ಯಜ್ಞ ಪ್ರಾರಂಭವಾಗುವ ಮುಂಚೆ ಯಜ್ಞಧ್ವಜಕ್ಕೆ ಪೂಜೆ ಸಲ್ಲಿಸಿ ಅದನ್ನು ರೋಹಣ ಮಾಡುತ್ತಾರೆ. ಈ ಧ್ವಜಾರೋಹಣವಾದ ನಂತರ ಯಜ್ಞ ಪ್ರಾರಂಭವಾಗುತ್ತದೆ. ಇದಂ ಯಾಗ ಶಾಲೆಯಲ್ಲಿ ನಡೆಯುವಂತಹದು. ದೇವಾಲಯದ ಪ್ರಾಂಗಣದಲ್ಲಿಯೇ ಈ ಯಾಗಶಾಲೆ ಇದೆ. ಇನ್ನೂ ಭೇರಿತಾಡನ

ಎಂಬ ಆಚರಣೆ ವಿಶಿಷ್ಟವಾಗಿ ಕಂಡುಬರುತ್ತದೆ. ಈ ಭೇರಿತಾಡನ ಎಂದರೆ ಭೇರಿಯನ್ನು ಪೂಜಾ ವೇಳೆಯಲ್ಲಿ ಬಾರಿಸುವುದು. ಅರ್ಚಕರು ಶ್ರೀರಾಮನಿಗೆ ಸಂಪ್ರದಾಯದಂತೆ ಪೂಜೆಸಲ್ಲಿಸುವಾಗ ಮಂತ್ರಗಳನ್ನು ರಾಗವಾಗಿ ಉಚ್ಚರಿಸುತ್ತಾರೆ. ಅವರು ಒಂದೊಂದು ಪೂಜೆಗೆ ಒಂದೊಂದು ರಾಗವನ್ನು ಅಳವಡಿಸಿಕೊಂಡು ಮಂತ್ರಗಳನ್ನು ಹೇಳುತ್ತಾರೆ. ಆ ರಾಗಗಳನ್ನು ಅನುಸರಿಸಿ ಭೇರಿಯನ್ನು ಬಾರಿಸುತ್ತಾರೆ. ರಾಗ ಬದಲಾದಂತೆ ಭೇರಿಯನ್ನು ಬಾರಿಸುವುದರಲ್ಲಿ ಬದಲಾವಣೆಯನ್ನು ತರಲಾಗುತ್ತದೆ. ಅಂದರೆ ರಾಗಕ್ಕೆ ತಕ್ಕಂತೆ ಇದನ್ನು ಬಾರಿಸಲಾಗುತ್ತದೆ. ಈ ಆಚರಣೆ ಮುಗಿದ ನಂತರ ಆ ದಿನದ ಸಂಜೆ ಹಂಸವಾಹನೋತ್ಸವ ಕಾರ್ಯಕ್ರಮವನ್ನು ಆಚರಿಸಲಾಗುತ್ತದೆ. ಹಂಸವಾಹನೋತ್ಸವ ಅಂದರೆ ಹಂಸಪಕ್ಷಿಯ ಮೇಲೆ ಶ್ರೀರಾಮದೇವರ ಉತ್ಸವ ಮೂರ್ತಿಯನ್ನು ಕೂರಿಸಿ ದೇವಾಲಯದ ಸುತ್ತ ಪ್ರದಕ್ಷಿಣೆ ಮಾಡಿಸುವುದಾಗಿದೆ. ಹಂಸವನ್ನು ವಿಷ್ಣುವಿನ ವಾಹನವೆಂದು ತಿಳಿಯಲಾಗಿದೆ. ವಿಷ್ಣುವಿನ ಅವತಾರಿಯಾದ ಶ್ರೀರಾಮನನ್ನು ಹಂಸನ ಮೇಲೆ ಕುಳ್ಳಿರಿಸಿ ಉತ್ಸವ ಮಾಡುವ ಸಂಪ್ರದಾಯ ಮೊದಲಿನಿಂದಲೂ ಇಲ್ಲಿ ಆಚರಣೆಯಲ್ಲಿದೆ. ಲೋಹದಿಂದ ತಯಾರಿಸಿದ ಹಂಸಪಕ್ಷಿಯ ಬೃಹತ್‌ಮೂರ್ತಿಯ ಮೇಲೆ ಶ್ರೀರಾಮನ ಪಂಚಲೋಹ ವಿಗ್ರಹವನ್ನು ಇಟ್ಟು, ಅದನ್ನು ಕ್ರಮಬದ್ಧವಾಗಿ ಪೂಜಿಸಿ ದೇವಾಲಯದ ಸುತ್ತ ಮಂತ್ರಪಠಣ ಮಾಡುತ್ತಾ ಮೂರು ಸುತ್ತು ಪ್ರದಕ್ಷಿಣೆ ಮಾಡಲಾಗುತ್ತದೆ. ಈ ಸಮಯದಲ್ಲಿ ಉತ್ಸವಕ್ಕೆಂದು ವಿಶೇಷವಾಗಿ ತಯಾರಿಸಿದ ಶ್ರೀರಾಮನ ಮೂರ್ತಿಯನ್ನು ಶುದ್ಧವಾಗಿ ತೊಳೆದು, ಅಲಂಕರಿಸಿ ಮೆರವಣಿಗೆ ಮಾಡಲಾಗುತ್ತದೆ. ಈ ಆಚರಣೆ ಮುಗಿದ ನಂತರ ದೇವಾಲಯದಲ್ಲಿ ವಿಶೇಷ ಪೂಜೆಯಾಗಿ ಮಂಗಳಾರತಿ ಮಾಡಿ ಪ್ರಸಾದವನ್ನು ವಿನಿಯೋಗಿಸಲಾಗುತ್ತದೆ.

ಜಾತ್ರೆಯ ಮೂರನೇ ದಿನ ಬೆಳಗಿನ ವೇಳೆಯಲ್ಲಿ ಬಲಿಹರಣ ಎಂಬ ಆಚರಣೆಯನ್ನು ಮಾಡಲಾಗುತ್ತದೆ. ಬಲಿಹರಣ ಎಂದರೆ ಅಷ್ಟದಿಕ್ಪಾಲಕರಿಗೆ ಸಸ್ಯಾಹಾರದ ಬಲಿಯನ್ನು ನೀಡುವುದು. ಅಂದರೆ ಪ್ರಾಣಿಬಲಿಯನ್ನು ಕೊಡುವುದಿಲ್ಲ. ಈ ದೇವಾಲಯ ವೈಷ್ಣವ ಸಂಪ್ರದಾಯಕ್ಕೆ ಒಳಪಟ್ಟಿರುವುದರಿಂದ ಶ್ರೀರಾಮನಿಗೆ ಪ್ರಿಯವೆಂದು ತಿಳಿಯಲಾದ ಮೊಸರನ್ನ ಮತ್ತು ಸಿಹಿ ಪೊಂಗಲನ್ನು ತಯಾರಿಸಿ ರಾಮನಿಗೆ ನೈವೇದ್ಯ ಮಾಡಿ ದೇವಾಲಯದ ಅಷ್ಟದಿಕ್ಕುಗಳಲ್ಲಿನ ದಿಕ್ಪಾಲಕರಿಗೆ ಪ್ರಸಾದವನ್ನು ನೀಡಲಾಗುತ್ತದೆ. ಇದನ್ನು ಬಲಿಹರಣ ಎಂಬ ಹೆಸರಿನಲ್ಲಿ ಆಚರಿಸಲಾಗುತ್ತದೆ. ಇದಾದ ನಂತರ ನಿತ್ಯೋತ್ಸವ ಎಂಬ ಆಚರಣೆ ನಡೆಯುತ್ತದೆ. ಈ ಆಚರಣೆಯಲ್ಲಿ ಶ್ರೀರಾಮ, ಸೀತಾ, ಲಕ್ಷ್ಮಣರ ಮೂರ್ತಿಯನ್ನು ಬಿದಿರಿನಿಂದ

ತಯಾರಿಸಿದ ಅಡ್ಡಪಲ್ಲಕ್ಕಿಯಲ್ಲಿ ಕೂರಿಸಿ, ಅದನ್ನು ಸಿಂಗರಿಸಿ ದೇವಾಲಯದ ಸುತ್ತ ಪ್ರದಕ್ಷಿಣೆ ಮಾಡುತ್ತಾರೆ. ಇದಾದ ನಂತರ ಸಂಜೆ ಚಂದ್ರಮಂಡಲೋತ್ಸವ ಎಂಬ ಕಾರ್ಯಕ್ರಮ ಜರುಗುತ್ತದೆ. ಇದರಲ್ಲಿ ಶ್ರೀರಾಮನ ಉತ್ಸವ ಮೂರ್ತಿಯನ್ನು ಚಂದ್ರವಾಹನದ ಮೇಲಿಟ್ಟು ಶೃಂಗಾರ ಮಾಡಿ ಅದನ್ನು ಉತ್ಸವದಲ್ಲಿ ಮೆರವಣಿಗೆ ಗೈಯಲಾಗುವುದು ಅಲ್ಲಿಗೆ ಮೂರನೇ ದಿನದ ಕಾರ್ಯ ಮುಗಿಯುತ್ತದೆ.

ಶುದ್ಧ ಪುಷ್ಯ ನವಮಿಯ ಬೆಳಗಿನ ಸಮಯದಂದು ಜಾತ್ರೆಯ ನಾಲ್ಕನೆಯ ದಿನದ ಶ್ರೀರಾಮನ ಉತ್ಸವ ನಡೆಯುತ್ತದೆ. ಸಂಜೆ ಅನಂತಪೀಠಾರೋಹಣೋತ್ಸವ ಎಂಬ ಕಾರ್ಯಕ್ರಮವನ್ನು ಆಚರಿಸಲಾಗುತ್ತದೆ. ಈ ಆಚರಣೆಯಲ್ಲಿ ಮೂರು ತಲೆಯುಳ್ಳ ಹಾವಿನ ಲೋಹದ ಪೀಠದ ಮೇಲೆ ಶ್ರೀರಾಮ, ಸೀತೆ ಮತ್ತು ಲಕ್ಷ್ಮಣರ ಉತ್ಸವ ಮೂರ್ತಿಯನ್ನು ಇರಿಸಿ ದೇವಾಲಯದ ಸುತ್ತ ಮೆರವಣಿಗೆ ಗೈಯಲಾಗುತ್ತದೆ.

ಇನ್ನು ಜಾತ್ರೆಯ ಐದನೇ ದಿನದಲ್ಲಿ ಕಂಡುಬರುವ ಆಚರಣೆ ತುಂಬ ವಿಶೇಷವಾದ ಹಾಗೂ ಪ್ರಮುಖವಾದ ಆಚರಣೆಯಾಗಿದೆ. ಇದು ಪುಷ್ಯ ಶುದ್ಧ ದಶಮಿಯಂದು ಆಚರಿಸಲ್ಪಡುತ್ತದೆ. ಈ ದಿನದಂದು ಬೆಳಗಿನ ಜಾವ ಎಂದಿನಂತೆ ಶ್ರೀರಾಮನ ಉತ್ಸವ ನಡೆಯುತ್ತದೆ. ಸಂಜೆ ಸೀತಾಕಲ್ಯಾಣೋತ್ಸವ ಎಂಬ ವಿಶೇಷವಾದ ಆಚರಣೆ ನಡೆಯುತ್ತದೆ. ಸೀತಾಕಲ್ಯಾಣೋತ್ಸವದಲ್ಲಿ, ಶ್ರೀರಂಗ ಯಾತ್ರೆಯನ್ನು ಮಾಡಲಾಗುತ್ತದೆ. ಅಂದರೆ ವರನು ಮದುವೆ ಮಂಟಪಕ್ಕೆ ಮೆರವಣಿಗೆಯಲ್ಲಿ ಬರುವ ಸಂಪ್ರದಾಯ ಇದರಲ್ಲಿ ರಾಮನನ್ನು ಮೆರವಣಿಗೆಯಲ್ಲಿ ಮದುವೆಯ ಮಂಟಪಕ್ಕೆ ಹೊತ್ತು ತರಲಾಗುತ್ತದೆ. ನಂತರ ಪುಷ್ಪಮಂಟೋಪೋತ್ಸವ ನಡೆಯುತ್ತದೆ. ಅಂದರೆ ಮದುವೆಯ ಮಂಟಪವನ್ನು ಸಿಂಗರಿಸಿ ಅದಕ್ಕೆ ವೈಷ್ಣವ ಸಂಪ್ರದಾಯದಂತೆ ಪೂಜೆ ಸಲ್ಲಿಸಿ ಕಲ್ಯಾಣಕ್ಕೆ ಸಿದ್ಧಪಡಿಸಲಾಗುತ್ತದೆ. ಇದಾದ ನಂತರ ಸೀತಾರಾಮರ ಕಲ್ಯಾಣ ಜರುಗುತ್ತದೆ.

ರಾಮ ಮತ್ತು ಸೀತೆಯರ ವಿಗ್ರಹಗಳನ್ನು ತೊಳೆದು, ಅವುಗಳಿಗೆ ರಾಮನನ್ನು ವರನಂತೆಯೂ, ಸೀತೆಯನ್ನು ವಧುವಿನಂತೆಯೂ ಶೃಂಗಾರ ಮಾಡಿ ಮಂಟಪದಲ್ಲಿ ಕೂರಿಸಲಾಗುತ್ತದೆ. ಅನಂತರ ಅಲ್ಲಿನ ಅರ್ಚಕರಲ್ಲಿ ಕೆಲವರು ರಾಮನ ಕಡೆಯವರಂತೆಯೂ, ಮತ್ತೆ ಕೆಲವರು ಸೀತೆಯ ಕಡೆಯವರಂತೆ ಇರುತ್ತಾರೆ. ಮುಂದುವರೆದು ರಾಮನು ಸಈತೆಗೆ ಮಾಂಗಲ್ಯಧಾರಣೆ ಮಾಡುವ ಹಾಗೆ ಅರ್ಚಕರು ಸೀತೆಗೆ ಮಾಂಗಲ್ಯಧಾರಣೆ ಮಾಡುತ್ತಾರೆ. ಅನಂತರ ಹಾರಬದಲಾಯಿಸುವ ಕಾರ್ಯಕ್ರಮ ನಡೆಯುತ್ತದೆ. ಅನಂತರ ಸೀತಾರಾಮರನ್ನು ಮೆರವಣಿಗೆಯಲ್ಲಿ

ಕೊಂಡೋಯ್ದು ಮಾಮೂಲಿಯಾಗಿ ಭಾರತೀಯ ಸಂಪ್ರದಾಯದಲ್ಲಿ ನಡೆಯುವಂತೆ ವಧುವರರನ್ನು ಪ್ರಥಮರಾತ್ರಿಗೆ ಕಳುಹಿಸುವಂತೆ, ರಾಮ-ಸೀತೆಯರ ವಿಗ್ರಹಗಳನ್ನು ಒಂದು ಕೋಣೆಯಲ್ಲಿಟ್ಟು, ಆ ಕೋಣೆಗೆ ಬೀಗ ಹಾಕಲಾಗುತ್ತದೆ. ಆ ಮೂರ್ತಿಗಳು ರಾತ್ರಿಯೆಲ್ಲಾ ಆ ಕೋಣೆಯಲ್ಲೆ ಇರುತ್ತವೆ. ನಂತರ ಬೆಳಿಗ್ಗೆ ಆ ಮೂರ್ತಿಗಳನ್ನು ಪೂಜಿಸಿ ಇಡಲಾಗುತ್ತದೆ. ಈ ಆಚರಣೆಯು ವಿಶಿಷ್ಟವಾಗಿದ್ದು ಜನರನ್ನು ಆಕರ್ಷಿಸುತ್ತದೆ.

ಜಾತ್ರೆಯ ಆರನೇ ದಿನದಂದು, ಅಂದರೆ ಪುಷ್ಯಶುದ್ಧ ಏಕಾದಶಿಯಂದು ಬೆಳಿಗ್ಗೆ ಎಂದಿನಂತೆ ರಾಮನ ನಿತ್ಯೋತ್ಸವ ನಡೆಯುತ್ತದೆ. ಸಂಜೆ ಪ್ರಹ್ಲಾದ ಪರಿಪಾಲನೆ, ಗರುಡೋತ್ಸವ ಎಂಬ ಆಚರಣೆಗಳು ಜರುಗುತ್ತವೆ. ಪ್ರಹ್ಲಾದ ಪರಿಪಾಲನೆ ಎಂದರೆ ವಿಷ್ಣುವಿನ ಅವತಾರದಲ್ಲಿ. ಒಂದಾದ ನರಸಿಂಹಾವತಾರದಲ್ಲಿ ಹಿರಣ್ಯಕಶ್ಯುಪುವನ್ನು ಕೊಂದು ತನ್ನ ಭಕ್ತ ಪ್ರಹ್ಲಾದನನ್ನು ಕಾಪಾಡಿದುದ್ದನ್ನು ಇಲ್ಲಿ ಸ್ಮರಿಸಲಾಗುತ್ತದೆ. ವಿಷ್ಣುವಿನ ಮತ್ತೊಂದು ಅವತಾರವಾದ ರಾಮನ ಅವತಾರದಲ್ಲಿ ಪ್ರಹ್ಲಾದ ಪರಿಪಾಲನೆ ಎಂಬ ಸಂಪ್ರದಾಯವನ್ನು ಆಚರಿಸುತ್ತಾರೆ. ಈ ಆಚರಣೆಯ ನಂತರ ಗರುಡೋತ್ಸವ ಎಂಬ ಆಚರಣೆಯನ್ನು ನೆರವೇರಿಸಲಾಗುತ್ತದೆ. ಗರುಡೋತ್ಸವ ಎಂದರೆ ಗರುಡನ ಮೇಲೆ ಶ್ರೀರಾಮನ ಮೂರ್ತಿಯನ್ನು ಕೂರಿಸಿ ಮೆರವಣಿಗೆ ಮಾಡುವುದಾಗಿದೆ. ಲೋಹದಿಂದ ತಯಾರಾದ ಬೃಹತ್ ಗರುಡನ ಮೂರ್ತಿಯ ಮೇಲೆ ರಾಮನ ಉತ್ಸವಮೂರ್ತಿಯನ್ನು ಇಟ್ಟು ದೇವಾಲಯದ ಸುತ್ತ ಮೆರವಣಿಗೆ ಗೈಯ್ಯಲಾಗುವುದು. ಇದರ ಹಿನ್ನೆಲೆಯೆಂದರೆ ವಿಷ್ಣುವಿನ ವಾಹನ ಗರುಡವಾಗಿರುವುದೇ ಆಗಿದೆ. ವಿಷ್ಣುವಿನ ಅವತಾರವಾದ ರಾಮನನ್ನು ಗರುಡನ ಮೇಲೆ ಕೂರಿಸಿ ಉತ್ಸವದಲ್ಲಿ ಕೊಂಡೊಯ್ಯಲಾಗುವುದು. ಈ ಉತ್ಸವವಾದ ಮೇಲೆ ಆರನೇ ದಿನದ ಜಾತ್ರೆ ಅಂತ್ಯ ಕಾಣುತ್ತದೆ.

ಜಾತ್ರೆಯ ಏಳನೇ ದಿನವಾದ ಪುಷ್ಯಶುದ್ಧ ದ್ವಾದಶಿಯಂದು ಬೆಳಗ್ಗೆ ಎಂದಿನಂತೆ ರಾಮನ ಉತ್ವವವಾಗುತ್ತದೆ. ಈ ದಿನ ಅಷ್ಟೇನೂ ಮಹತ್ವದಲ್ಲದಿದ್ದರೂ, ರಥೋತ್ಸವದ ಹಿಂದಿನ ದಿನವಾದ್ದರಿಂದ ಪೂರ್ವಭಾವಿ ಸಿದ್ಧತೆಯಿಂದ ಪ್ರಮುಖವಾಗುತ್ತದೆ. ಈ ದಿನದ ಸಂಜೆಯಂದು ಗಜೇಂದ್ರಮೋಕ್ಷ ಮತ್ತು ಧ್ವಜಾರೋಹಣ ಕಾರ್ಯಗಳು ನೆರವೇರುತ್ತವೆ. ಗಜೇಂದ್ರಮೋಕ್ಷ ಸಂಪ್ರದಾಯ ಆಚರಣೆಯ ಬಗ್ಗೆ ಒಂದು ಪುರಾಣ ಕಥೆಯೇ ಹರಡಿದೆ. ಅದೆಂದರೆ, ಹಿಂದೆ ರಾಮನು ಚುಂಚಾರಣ್ಯಕ್ಕೆ ಬಂದಿದ್ದಾಗ, ಒಂದು ದಿನ ಹೊಳೆಯಲ್ಲಿ ಆನೆ (ಗಜೇಂದ್ರ) ನೀರು ಕುಡಿಯಲು ಹೋಗಿದ್ದಾಗ ಹೊಳೆಯಲ್ಲಿದ್ದ ಮೊಸಳೆಯೊಂದು ಆನೆಯ ಕಾಲನ್ನು ಹಿಡಿಯಿತು. ಆನೆಯು

ನೋವಿನಿಂದ ನರಳುತ್ತಿದ್ದಾಗ ಆ ಆನೆಯ ಆರ್ತನಾದ ಅಲ್ಲೇ ಇದ್ದ ಶ್ರೀರಾಮನಿಗೆ ಕೇಳಿಸಿ, ಶ್ರೀರಾಮನು ಆನೆಯ ಕೂಗು ಕೇಳುತ್ತಿದ್ದ ಕಡೆಗೆ ಧಾವಿಸಿ ಬಂದನು. ಮೊಸಳೆಯ ಬಾಯಿಗೆ ಸಿಕ್ಕಿ ನರಳುತ್ತಿದ್ದ ಆನೆಯನ್ನು ಕೂಗು ಕೇಳುತ್ತಿದ್ದ ಕಡೆಗೆ ಧಾವಿಸಿ ಬಂದನು. ಮೊಸಳೆಯ ಬಾಯಿಗೆ ಸಿಕ್ಕಿ ನರಳುತ್ತಿದ್ದ ಆನೆಯನ್ನು ಕಂಡು ಬಹಳ ಸಂಕಟಪಟ್ಟು, ಮೊಸಳೆಯ ಬಾಯಿಗೆ ಬಿಲ್ಲಿನಿಂದ ಬಾಣವನ್ನು ಬಿಟ್ಟು ಆನೆಯನ್ನು ಮೊಸಳೆಯಿಂದ ಪಾರು ಮಾಡಿದನಂತೆ, ಆದ್ದರಿಂದ ಈ ಆಚರಣೆಯನ್ನು ಆಚರಿಸಲಾಗುತ್ತದೆಯೆಂದು ಜನ ಹೇಳುತ್ತಾರೆ.

ಗಜೇಂದ್ರ ಮೋಕ್ಷ ಆಚರಣೆಯ ಕಾಲದಲ್ಲಿ ಶ್ರೀರಾಮನನ್ನು ಮೆರವಣಿಗೆಯಲ್ಲಿ ಹೊಳೆಯ ಬಳಿ ಕೊಂಡೊಯ್ದು ಅಲ್ಲಿ ಪೂಜಿಸಿ ಮತ್ತೆ ದೇವಸ್ಥಾನಕ್ಕೆ ಮೆರವಣಿಗೆಯಲ್ಲಿ ಮಂಗಳವಾದ್ಯದ ಸಮೇತ ತರುತ್ತಾರೆ. ಅನಂತರ ಧ್ವಜಾರೋಹಣ ನಡೆಯುತ್ತದೆ. ರಥೋತ್ಸವದ ಹಿಂದಿನ ದಿನ ಇದು ನಡೆಯುವುದರಿಂದ ರಥೋತ್ಸವ ನಡೆಯುವ ಮುನ್ಸೂಚನೆಯಾಗಿ ಧ್ವಜವನ್ನು ದೇವಾಲಯದ ಮುಂದೆ ಹಾರಿಸಲಾಗುತ್ತದೆ. ಈ ಧ್ವಜ ಗರುಡ ಚಿಹ್ನೆಯುಳ್ಳ ಧ್ವಜವಾಗಿರುತ್ತದೆ.

ಜಾತ್ರೆಯ ಎಂಟನೆಯದಿನ ಬಹಳ ಪ್ರಮುಖವಾದ ದಿನ. ಪುಷ್ಯ ಶುದ್ಧ ತ್ರಯೋದಶಿಯಂದು, ಮೃಗಶಿರಾ ನಕ್ಷತ್ರದಲ್ಲಿ ಸಲ್ಲುವ ಶುಭದಿನದಂದು ಶ್ರೀರಾಮನ ರಥೋತ್ಸವ ಜರುಗುತ್ತದೆ. ಈ ದಿನದಂದು ಬೆಳಗ್ಗೆ ಯಾತ್ರಾದಾನ ಎಂಬ ಆಚರಣೆ-ಯನ್ನು ಮಾಡಲಾಗುತ್ತದೆ. ರಥೋತ್ಸವಕ್ಕೆ ದೇವರನ್ನು ತೆಗೆದುಕೊಂಡು ಹೋಗುವ ಮುಂಚೆ ಈ ಕಾರ್ಯ ನೆರವೇರುತ್ತದೆ. ದೇವಾಲಯದ ಪ್ರಧಾನ ಅರ್ಚಕರು ರಥೋತ್ಸವಕ್ಕೆ ಶ್ರೀರಾಮ, ಸೀತೆ, ಲಕ್ಷ್ಮಣರ ಮೂರ್ತಿಯುಳ್ಳ ವಿಗ್ರಹವನ್ನು ಊರಿನ ಮುಖಂಡರ ಮುಖಾಂತರ ರಥಕ್ಕೆ ಸಾಗಿಸುವಂತಹ ಆಚರಣೆ ಇದಾಗಿದೆ. ಇದಾದ ನಂತರ ಶುಭಲಗ್ನದಲ್ಲಿ ರಥವನ್ನು ಧರ್ಮದರ್ಶಿಯಲ್ಲಿರುವ ಮುಖಂಡರು ಅಂದರೆ ಸುತ್ತಮುತ್ತಲ ಗ್ರಾಮಸ್ಥರು ರಥವನ್ನು ಎಳೆಯುವ ಮೂಲಕ ಚಾಲನೆಗೊಳಿಸುತ್ತಾರೆ. ಈ ರಥವು ಹಿಂದೆ ಬಿದಿರಿನಿಂದ ತಯಾರಿಸಲ್ಪಡುತ್ತಿತ್ತು. ರಥೋತ್ಸವದ ಸ್ವಲ್ಪದಿನ ಮುಂಚೆ ಸುತ್ತಮುತ್ತಲ ಜನಗಳೆಲ್ಲಾ ಸೇರಿ ಕಾಡಿಗೆ ಹೋಗಿ ಬಿದಿರನ್ನು ಕಡಿದು ತಂದು, ರಥವನ್ನು ತಯಾರಿಸುತ್ತಿದ್ದರು. ೧೯೩೬ರಲ್ಲಿ ಮೈಸೂರಿನ ಅರಸರಿಂದ ಕೊಡುಗೆಯಾಗಿ ಮರದ ಬೃಹತ್ ರಥವೊಂದನ್ನು ಖಾಯಂ ಆಗಿ ಮಾಡಿಸಿಕೊಟ್ಟಂದಿನಿಂದ ಆ ರಥದಲ್ಲೇ ಮೂರ್ತಿಯನ್ನು ಇರಿಸಿ ರಥೋತ್ಸವ ಮಾಡುತ್ತಿದ್ದಾರೆ.

ರಥೋತ್ಸವ ದಿನ ದೂರ ದೂರದಿಂದ ಜನರು ಬಂದು ಭಾಗವಹಿಸುತ್ತಾರೆ. ಸುಮಾರು ೫೦ ಸಾವಿರಕ್ಕೂ ಅಧಿಕ ಜನ ಈ ರಥೋತ್ಸವದಲ್ಲಿ ಭಾಗವಹಿಸುತ್ತಾರೆ. ಆ ದಿನ ಜನರು ಹೊಳೆಯಲ್ಲಿ ಮಿಂದು ಶ್ರೀರಾಮನ ದರ್ಶನ ಪಡೆದು ಪುನೀತರಾಗುತ್ತಾರೆ.

ಹಿಂದೆ ಅಂದರೆ ರಾಜರ ಕಾಲದಲ್ಲಿ ಮೈಸೂರಿನ ಅರಸರು ರಥೋತ್ಸವದ ದಿನ ಬಂದು ಸ್ಥಳೀಯ ಶಾಸಕರು ರಥೋತ್ಸವಕ್ಕೆ ಚಾಲನೆ ನೀಡುತ್ತಿದ್ದಾರೆ.

ಶ್ರೀರಾಮ, ಸೀತಾ, ಲಕ್ಷ್ಮಣರ ಮೂರ್ತಿಯನ್ನು ಹೊತ್ತ ರಥ ದೇವಾಲಯದ ಸುತ್ತ ಭಕ್ತಾದಿಗಳಿಂದ ಎಳೆಲಯಲ್ಪಡುತ್ತದೆ. ರಥೋತ್ಸವವು ಮದ್ಯಾಹ್ನ ಎರಡು ಗಂಟೆಯವರೆಗೆ ನಡೆಯುತ್ತದೆ. ಅನಂತರ ರಥದಿಂದ ದೇವತಾ ಮೂರ್ತಿಯನ್ನು ತಂದು ಅಶುದ್ಧವಾಗಿದ್ದಾನೆಂದು ದೇವರನ್ನು ಶುದ್ಧೀಕರಿಸಿ, ಪೀಠಕ್ಕೆ ಕುಳ್ಳಿರಿಸುವಂತಹ ಮಂಟಪೋತ್ಸವ ಎಂಬ ಕಾರ್ಯಕ್ರಮ ಜರುಗುತ್ತದೆ. ಶಾಯ್ಯೋತ್ಸವದಲ್ಲಿ, ರಥೋತ್ಸವದಲ್ಲಿ ಭಾಗವಹಿಸಿದ ಶ್ರೀರಾಮ, ಸೀತಾ, ಲಕ್ಷ್ಮಣರು ದಣಿದಿದ್ದಾರೆಂದು ತಿಳಿದು ಅವರನ್ನು ಅಂದರೆ ಅವರ ಮೂರ್ತಿಗಳನ್ನು ತೊಳೆದು ಶುದ್ಧೀಕರಿಸಿ, ಪೂಜಿಸಿ ಅನಂತರ ಐದು ಎಳನೀರನ್ನು ನೈವೇದ್ಯವಾಗಿ ನೀಡುತ್ತಾರೆ. ಅಲ್ಲದೆ ರಥೋತ್ಸವದ ಗಲಾಟೆಯಿಂದ ಶ್ರೀರಾಮ ಮನಸ್ಸು ಅಲ್ಲೋಲ ಕಲ್ಲೋಲವಾಗಿದೆ. ಎಂದು ನಂಬಿ ಅವನಿಗೆ ಶಾಂತವಾಗಿರಲು ಈ ಶಾಂತ್ಯೋತ್ಸವವನ್ನು ಮಾಡುತ್ತಾರೆ ಎಂಬ ನಂಬಿಕೆ ಇದೆ.

ಜಾತ್ರೆಯ ೯ನೆಯ ದಿನ ಅಂದರೆ ಪುಷ್ಯಶುದ್ಧ ಚತುರ್ದಶಿಯಂದು ಬೆಳಗ್ಗೆ ಎಂದಿನಂತೆ ನಿತ್ಯೋತ್ಸವ ಕಾರ್ಯ ಜರುಗುತ್ತದೆ, ಅನಂತರ ಸಂಜೆ ಮೃಗಯಾತ್ರೆ, ಅಶ್ವಾರೋಹಣ, ದೋಲೋತ್ಸವ, ಕಳ್ಳರ ಸುಲಿಗೆ ಎಂಬ ಆಚರಣೆಗಳು ಜರುಗುತ್ತವೆ. ಮೃಗಯಾತ್ರೆ ಅಂದರೆ ಈ ದೇವಾಲಯದಲ್ಲಿ ಶ್ರೀರಾಮನ ಜೊತೆ ಹನುಮನಿಲ್ಲ. ಹಿಂದೆ ಅದರ ಬಗ್ಗೆ ವಿವರಿಸಿದಂತೆ, ಹನುಮಗುಡಿ ಹೊಳೆಯ ಪಕ್ಕದಲ್ಲಿ ಇದೆ. ಶ್ರೀರಾಮನ ವರದಂತೆ ಮೊದಲ ಪೂಜೆ ಹನುಮನಿಗೆ ಸಲ್ಲುತ್ತದೆ. ಅದರಂತೆ ರಾಮನನ್ನು ಮಂಗಳ ವಾದ್ಯಗಳ ಸಮೇತ ಹನುಮನ ಗುಡಿಗೆ ಕೊಂಡೊಯ್ದು ಹನುಮನ ಮುಂದೆ ರಾಮನನ್ನು ಇಟ್ಟು ಪೂಜಿಸುತ್ತಾರೆ. ಹನುಮ ಮೂಲತಃ ಪ್ರಾಣಿಯಾದುದರಿಂದ ರಾಮ ಅವನಲ್ಲಿಗೆ ಯಾತ್ರೆ ಮಾಡುವುದರಿಂದ ಮೃಗಯಾತ್ರೆ ಎಂದು ಇದನ್ನು ಕರೆಯಲಾಗುತ್ತದೆ. ಹನುಮನ ಮುಂದೆ ಶ್ರೀರಾಮನ ಮೂರ್ತಿಯನ್ನಿಟ್ಟು ಪೂಜಿಸಿದ ನಂತರ ನೈವೇದ್ಯಕ್ಕೆಂದು ಸಿಹಿಪೊಂಗಲು, ಖಾರಾಪೊಂಗಲು ಮತ್ತು ಮೊಸರನ್ನವನ್ನು ಮಾಡಿ ನೈವೇದ್ಯ ಮಾಡಲಾಗುತ್ತದೆ. ಈ ದಿನದಂದು ಮಾತ್ರ ಖಾರಾಪೊಂಗಲನ್ನು ಮಾಡಲಾಗುತ್ತದೆಯಂತೆ. ಇದಕ್ಕೆ ನಿರ್ದಿಷ್ಟ ಕಾರಣ ತಿಳಿದು ಬರುವುದಿಲ್ಲ. ಇದು ಕೇವಲ ಸಂಪ್ರದಾಯವಾಗಿ ಮಾತ್ರ ಉಳಿದು ಬಂದಿದೆ. ಈ ದಿನದಿಂದ ಮುಂದಿನ ವರ್ಷದಲ್ಲಿ ನಡೆಯುವ ಮೃಗಯಾತ್ರೆಯವರೆಗೂ ದಿನಾ ದೇವರ ನೈವೇದ್ಯಕ್ಕೆ ಮೊಸರನ್ನವನ್ನು ಮಾತ್ರ ಮಾಡಲಾಗುತ್ತದೆಯಂತೆ, ಕೆಲವು ವಿಶೇಷ ದಿನಗಳಲ್ಲಿ ಮಾತ್ರ ಸಿಹಿಪೊಂಗಲನ್ನು ಮೊಸರನ್ನದ ಜೊತೆ ಮಾಡಲಾಗುತ್ತದೆ. ಮೃಗಯಾತ್ರೆ ಮುಗಿದ

ನಂತರ ಅಶ್ವಾರೋಹಣ ಜರುಗುತ್ತದೆ. ಶ್ರೀರಾಮನ ವಿಗ್ರಹವನ್ನು ಕುದುರೆ ಮೇಲೆ ಕೂರಿಸಿ ಮೆರವಣಿಗೆ ಮಾಡಲಾಗುತ್ತದೆ.

ಆನಂತರ ಡೋಲೋತ್ಸವ ಎಂಬ ಕಾರ್ಯಕ್ರಮ ಜರುಗುತ್ತದೆ. ಇದರಲ್ಲಿ ದೇವರನ್ನು ಹೊಳೆಯ ಬಳಿಗೆ ಕೊಂಡೊಯ್ದು ಪೂಜಿಸಿ ಮಂಗಳವಾದ್ಯದೊಂದಿಗೆ ಮೆರವಣಿಗೆಯಲ್ಲಿ ತಂದು ಅದನ್ನು ದೇವಾಲಯದಲ್ಲಿ ಇಡುತ್ತಾರೆ. ದೇವರ ಮುಂದೆ ವಾದ್ಯ ವೃಂದದವರು ಕುಳಿತು ನಾನಾ ಬಗೆಯ ರಾಗಗಳನ್ನಾಡಿಸಿ ದೇವರನ್ನು ಸಂತೋಷಪಡಿಸುತ್ತಾರೆ. ಈ ಆಚರಣೆಯ ಸಮಯದಲ್ಲಿ ಅರ್ಚಕರು ದೇವರನ್ನು ಮಂತ್ರಪಠಣ ಮಾಡುತ್ತಾ ಪುಷ್ಪವನ್ನು ಎರೆಯುವುದರ ಮೂಲಕ ಪೂಜಿಸುತ್ತಿರುತ್ತಾರೆ.

ಇದಾದ ನಂತರ ವಿಶಿಷ್ಟವಾದ ಕಳ್ಳರಸುಲಿಗೆ ಎಂಬ ಸಂಪ್ರದಾಯವನ್ನು ಆಚರಿಸಲಾಗುತ್ತದೆ. ಹಿಂದೆ ಚುಂಚ, ಚುಂಚಿಯರ ಮುಖಂಡತ್ವದಲ್ಲಿದ್ದ ಬೇಡರ ತಂಡ ಕಾಡಿನ ಮಧ್ಯೆ ಓಡಾಡುವ ಜನರಿಂದ ಹಣ, ವಸ್ತುಗಳನ್ನು ದರೋಡೆ ಮಾಡಿ ದೋಚುತ್ತಿದ್ದರೆಂಬ ಪುರಾಣ ಪ್ರಸಿದ್ಧ ಕಥೆ ಈಗಲೂ ಜನರ ಮಧ್ಯೆ ಇದೆ. ಆ ಚುಂಚ ಚುಂಚಿಯರು ಮುಂದೆ ಮುನಿಯ ಪ್ರಭಾವದಿಂದ ರಾಮನ ಭಕ್ತರಾಗಿ ದರ್ಶನ ಪಡೆದು ಮುಕ್ತಿಹೊಂದಿದುದನ್ನು ಹಿಂದೆ ವಿವರಿಸಲಾಗಿದೆ. ಅವರ ಜ್ಞಾಪಕಾರ್ಥವಾಗಿ ಈ ಸಂಪ್ರದಾಯ ಬಳಕೆಯಲ್ಲಿದೆ ಎಂಬುದು ಇಲ್ಲಿನ ಜನರ ನಂಬಿಕೆಯಾಗಿದೆ. ಕಳ್ಳರ ಸುಲಿಗೆ ಎಂಬ ಆಚರಣೆಯಲ್ಲಿ ಹೊಳೆಯ ದಡದಲ್ಲಿ ಮೂರ್‍ನಾಲ್ಕು ಜನ ದೃಡಕಾಯ ಯುವಕರು ಆ ಕಡೆ ಬರುವ ಜನರನ್ನು ದೋಚುವಂತೆ ನಟಿಸುತ್ತಾರೆ ಆ ಸಮಯದಲ್ಲಿ ಅಲ್ಲಿಗೆ ಶ್ರೀರಾಮ ಮೂರ್ತಿಯನ್ನು ತರಲಾಗುತ್ತದೆ. ಆ ಮೂರ್ತಿಯನ್ನು ಕಂಡು ಆ ಯುವಕರು ಶರಣಾಗಿ ತಮ್ಮ ತಪ್ಪು ಅರಿವಾಗಿ ರಾಮನಲ್ಲಿ ಕ್ಷಮೆ ಬೇಡುತ್ತಾರೆ. ನಂತರ ಆ ಯುವಕರು ರಾಮನನ್ನು ಪೂಜಿಸಿ, ಮೆರವಣಿಗೆಯಲ್ಲಿ ರಾಮನನ್ನು ಹೊತ್ತು ದೇವಾಲಯದ ಸುತ್ತ ಪ್ರದಕ್ಷಿಣೆ ಹಾಕಿ, ಒಳಗೆ ಕೊಂಡೊಯ್ಯುತ್ತಾರೆ. ಈ ಕಳ್ಳರ ಸುಲಿಗೆ ಸಂಪ್ರದಾಯವು ಬಹಳ ವಿಶಿಷ್ಟವಾದ ಸಂಪ್ರದಾಯವಾಗಿದ್ದು ಇದು ಜನಾಕರ್ಷಣೆಯ ಕೇಂದ್ರಬಿಂದುವಾಗಿದೆ.

ಕಳ್ಳರ ಸುಲಿಗೆಯ ಬಗ್ಗೆ ಇನ್ನೊಂದು ಕಥೆಯನ್ನು ಜನ ಹೇಳುತ್ತಾರೆ. ಹಿಂದೆ ಶ್ರೀರಾಮನು ಅಯೋಧ್ಯೆಯನ್ನಾಳುತ್ತಿದ್ದ ಸಂದರ್ಭದಲ್ಲಿ ಸೀತೆಯ ಜೊತೆ ಮಲಗಿರುತ್ತಾನಂತೆ, ಅಂತಹ ರಾತ್ರಿ ಸಮಯದಲ್ಲಿ ಕಳ್ಳರು ಕೆಲವು ಜನರನ್ನು ತಡೆದು ಸುಲಿಗೆ ಮಾಡುತ್ತಿದ್ದರು. ಆ ಜನರು ಕಳ್ಳರಿಂದ ಪಾರಾಗಲು ಶ್ರೀರಾಮನನ್ನು ಧ್ಯಾನಿಸಿದರಂತೆ ಇದನ್ನರಿತ ಶ್ರೀರಾಮ, ಸೀತೆಗೂ ಹೇಳದೆ ಅಲ್ಲಿಗೆ ಹೋಗಿ ಕಳ್ಳರಿಂದ ಆ

ಜನರನ್ನು ಕಾಪಾಡಿದನಂತೆ, ನಂತರ ಅವನು ಹಿಂದಿರುಗಿ ಬಂದಾಗ ಕೋಟೆಯ ಬಾಗಿಲನ್ನು ಕಾಯುತ್ತಿದ್ದ ಕಾವಲುಗಾರರು ರಾಮನನ್ನು ಒಳಗೆ ಬಿಡದಂತೆ ಸೀತಾದೇವಿಯ ಆಜ್ಞೆಯಾಗಿದೆ ಎಂದು ಹೇಳಿದರಂತೆ. ಆಗ ಶ್ರೀರಾಮನು ಸೀತೆಯನ್ನು ಕರೆದು ವಿಚಾರಿಸಲಾಗಿ ತನಗೆ ಹೇಳದೆ ಹೋದರಲ್ಲಿ ಅದಕ್ಕೆ ಎಂದಾಗ ರಾಮನು ತನು ಅಯೋಧ್ಯೆಯ ರಾಜ, ಪ್ರಜೆಗಳ ರಕ್ಷಣೆ ನನ್ನ ಕರ್ತವ್ಯ. ಆದ್ದರಿಂದ ಹೋದೆ ಎನ್ನಲಾಗಿ ಕೋಟೆಯ ದ್ವಾರವನ್ನು ತೆರೆಯಲಾಯಿತಂತೆ. ಹೀಗೆ ಈ ಸಂಪ್ರದಾಯದ ಆಚರನೆಗೆ ಕಾರಣವನ್ನು ಅಲ್ಲಿನ ಜನರು ತಿಳಿಸುತ್ತಾರೆ. ಇದರ ಜ್ಞಾಪಕಕ್ಕಾಗಿ ಅಶ್ವಾರೋಹಣ ಮತ್ತು ಕಳ್ಳರ ಸುಲಿಗೆ ಸಂಪ್ರದಾಯಗಳನ್ನು ಆಚರಿಸುತ್ತಾರೆ.

ಮಾರನೆಯ ದಿನ ಪುಷ್ಯಶುದ್ಧ ಪೂರ್ಣಿಮೆಯಂದು ಅಂದರೆ ಜಾತ್ರೆಯ ೧೦ನೆಯ ದಿನ ಪ್ರಮುಖವಾದುದಾಗಿದೆ. ಈ ದಿನದಂದು ಅನಭೃತ ಮತ್ತು ತೆಪ್ಪೋತ್ಸವ ಕಾರ್ಯಗಳು ಜರುಗುತ್ತವೆ. ೧೦ನೇ ದಿನದ ಬೆಳಗ್ಗೆ ಎಂದಿನಂತೆ ರಾಮನ ಉತ್ಸವವಾದ ಮೇಲೆ ಅನಭೃತ ಎಂಬ ಆಚರಣೆಯನ್ನು ಆಚರಿಸುತ್ತಾರೆ. ಹಿಂದೂ ಸಂಪ್ರದಾಯದಲ್ಲಿ ಮದುವೆಯಾದ ನಂತರ ಹೆಣ್ಣು-ಗಂಡನ್ನು ಮದುವೆಯ ಮಾರನೆಯ ದಿವಸ ಓಕುಳಿ ಆಡಿಸುವ ಆಚರಣೆ ಇದೆ. ಹಾಗೆಯೇ ಶ್ರೀರಾಮ ಮತ್ತು ಸೀತೆಯರ ಕಲ್ಯಾಣವಾದ ನಂತರ ಅವರನ್ನು ಓಕುಳಿ ಆಡಿಸುವಂತಹ ಸಂಪ್ರದಾಯವೇ ಅನಭೃತವಾಗಿದೆ. ವಧುವರರ ಮಧ್ಯೆ ಇರುವ ಅಂಜಿಕೆ, ಆತಂಕಗಳನ್ನು ಹೋಗಲಾಡಿಸಲು ಮತ್ತು ವಧು-ವರರು ಶುದ್ಧವಾಗಲು ಈ ಆಚರಣೆ ಬಳಕೆಯಲ್ಲಿದೆ. ಶ್ರೀರಾಮ, ಸೀತೆಯರ ಮೂರ್ತಿಗಳನ್ನು ಒಂದು ಕಟ್ಟೆಯ ಮೇಲಿಟ್ಟು, ಅರಿಶಿನ ನೀರನ್ನು ಅವರ ಮೇಲೆ ಸುರಿಯುತ್ತಾರೆ. ಇಲ್ಲಿ ರಾಮನ ಕಡೆಯಿಂದ ಕೆಲವು ಜನ, ಸೀತೆಯ ಕಡೆಯಿಂದ ಕೆಲವು ಜನ ಪರಸ್ಪರ ನೀರನ್ನು ಆ ಮೂರ್ತಿಗಳ ಮೇಲೆ ಸುರಿಯುತ್ತಾರೆ. ಇದಾದ ನಂತರ ಆ ವಿಗ್ರಹಗಳನ್ನು ಶೃಂಗರಿಸುತ್ತಾರೆ. ಈ ಆಚರಣೆ ಮುಗಿದ ನಂತರ ಶ್ರೀರಾಮನನ್ನು ಮೆರವಣಿಗೆಯಲ್ಲಿ ಹೊಳೆಯಬಳಿಗೆ ಕೊಂಡೊಯ್ದು ತೆಪ್ಪೋತ್ಸವ ಕಾರ್ಯಕ್ರಮಕ್ಕೆ ಸಜ್ಜುಗೊಳಿಸುತ್ತಾರೆ.

ತೆಪ್ಪೋತ್ಸವಕ್ಕೆ ಎಂದರೆ ನೀರಿನಲ್ಲಿ ತೆಪ್ಪದ ಮೇಲೆ ದೇವರ ವಿಗ್ರಹವನ್ನು ಇಟ್ಟುಕೊಂಡು ಅದನ್ನು ಪೂಜಿಸುವುದು ಜನರು ಮಾಡಿದ ಪಾಪಕರ್ಮಗಳನ್ನು ಗಂಗೆ ಯಾವ ರೀತಿ ತೊಳೆಯುತ್ತಾಳೋ ಅದೇ ರೀತಿ ನಾವುಗಳು ಮಾಡಿದ ಪಾಪ ಕರ್ಮಗಳು ತೆಪ್ಪಗಳನ್ನು ಗಂಗೆಯಲ್ಲಿ ಕೊಚ್ಚಿಕೊಂಡು ಹೋಗಲಿ ಎಂಬ ನಂಬಿಕೆಯಿಂದ ದೇವರ ಹೆಸರಿನಲ್ಲಿ ಈ ತಪ್ಪೋತ್ಸವವನ್ನು ಆಚರಿಸುತ್ತಾರೆ. ತೆಪ್ಪ ಎಂದರೆ ಒಂದು ಹಾಯಿದೋಣಿಯಾಗಿರುತ್ತದೆ. ಅದಕ್ಕೆ ಹೂವಿನ ಅಲಂಕಾರ ಮಾಡಿ ಶೃಂಗರಿಸಿ, ಅದಕ್ಕೆ

ವಿವಿಧ ರಈತಿಯ ರಂಗು ರಂಗಿನ ಬಟ್ಟೆಗಳನ್ನು ಸುತ್ತಿ ಅದು ಅಂದರೆ ತೆಪ್ಪವು ವಿಜೃಂಭಿಸುವಂತೆ ಸಿಂಗರಿಸುತ್ತಾರೆ. ಆದರೆ ಮೇಲೆ ರಾಮನ ವಿಗ್ರಹವನ್ನು ಇಟ್ಟು ಅರ್ಚಕರು ಪೂಜೆ ಮಾಡಿದ ಮೇಲೆ ಆ ಹರಿಗೋಲನ್ನು ನಡೆಸುವುವವನು ಆಳವಾದ ನೀರಿನಲ್ಲಿ ಅದನ್ನು ತೆಗೆದುಕೊಂಡು ಹೋಗಿ ಅಲ್ಲಿ ಎರಡು ಮೂರು ಬಾರಿ ಪೂರ್ವದಿಂದ ಪಶ್ಚಿಮಕ್ಕೆ ಸುತ್ತಿಸುತ್ತಾನೆ. ಈ ತೆಪ್ಪೋತ್ಸವವನ್ನು ಪಕ್ಕದಲ್ಲೇ ಹರಿಯುವ ಕಾವೇರಿ ನದಿಯಲ್ಲಿ ಆಚರಿಸಲಾಗುತ್ತದೆ. ಈ ತೆಪ್ಪೋತ್ಸವಕ್ಕೆ ಮೊದಲು ದೇವರನ್ನು ಪೂಸಜಿಸಲೆಂದು, ಹೊಳೆಯ ಪಕ್ಕದಲ್ಲೆ ಒಂದು ಮಂಟಪ ಇದೆ. ಅದಕ್ಕೆ ತೆಪ್ಪೋತ್ಸವ ಮಂಟಪ ಎಂದು ಕರೆಯಲಾಗುತ್ತದೆ. ಈ ಆಚರಣೆ ಸಾಮಾನ್ಯವಾಗಿ ರಾತ್ರಿಯ ವೇಳೆ ನಡೆಯುತ್ತದೆ. ಈ ತೆಪ್ಪೋತ್ಸವ ಮುಗಿದ ನಂತರ ಧ್ವಜಾ ಅವರೋಹಣ ಕಾರ್ಯಕ್ರಮ ಜರುಗುತ್ತದೆ. ಜಾತ್ರೆಯ ಪ್ರಾರಂಭದಲ್ಲಿ ದೇವಾಲಯದ ಮುಂದೆ ಇರುವ ಗರುಡ ಸ್ತಂಭದ ಮೇಲೆ ಹಾರಿಸಲಾದ ಧ್ವಜವನ್ನು ಜಾತ್ರೆ ಮುಗಿದ ಸಂಕೇತವಾಗಿ ಅದನ್ನು ಅವರೋಹಣ ಮಾಡುತ್ತಾರೆ.

ಆನಂತರದ ದಿನ ಅಂದರೆ ಜಾತ್ರೆಯ ೧೧ನೇ ದಿನವಾದ ಪುಷ್ಯ ಕೃಷ್ಣಪಾಡ್ಯದಂದಂ ಶ್ರೀರಾಮನಿಗೆ ಮಹಾಭಿಷೇಕ ನಡೆಯುತ್ತದೆ. ಅದಾದ ನಂತರ ಹನುಮಂತೋತ್ಸವ ಎಂಬ ಕಾರ್ಯಕ್ರಮ ಆಚರಿಸಲಾಗುತ್ತದೆ. ಈ ಆಚರಣೆಯಲ್ಲಿ ಹನುಮಂತನ ಬೃಹತ್ ಲೋಹದ ಮೂರ್ತಿಯ ಹೆಗಲ ಮೇಲೆ ಶ್ರೀರಾಮನ ವಿಗ್ರಹವನ್ನಿಟ್ಟು ಮೆರವಣಿಗೆ ಮಾಡುತ್ತಾರೆ. ಇದರ ಮಾರನೆಯ ದಿವಸ ರಾಮನ ಉತ್ಸವ ಮಾಡಿ ಪೂಜಿಸಿ ಮೂರ್ತಿಯನ್ನಿಟ್ಟು ಜಾತ್ರೆಯನ್ನು ಮುಗಿಸುತ್ತಾರೆ.

ಹೀಗೆ ಸತತ ೧೨ ದಿನಗಳ ಕಾಲ ನಡೆಯುವ ಈ ಜಾತ್ರೆಯಂದು ಹಲವು ವಿಧಿ-ವಿಧಾನಗಳನ್ನು ಆಚರಿಸುವ ಜನರು ತಮ್ಮ ತಮ್ಮ ನಂಬಿಕೆಗಳಿಗನುಸಾರವಾಗಿ ಭಾಗವಹಿಸಿ ದೇವರನ್ನು ಪೂಜಿಸುತ್ತಾರೆ.

ಪ್ರಾಚೀನವಾದ ಈ ದೇವಾಲಯಕ್ಕೆ ಯುಗಾಂತರ ಹಿನ್ನೆಲೆಯನ್ನು ಹೇಳಿದರೂ ವಾಸ್ತವವಾಗಿ ವಿಜಯನಗರ ಶೈಲಿಯನ್ನು ದೇವಾಲಯ ಹೊಂದಿದೆ. ಅಲ್ಲದೆ ದೇವಾಲಯದ ಪ್ರಕಾರವನ್ನು ಮುಮ್ಮಡಿ ಕೃಷ್ಣರಾಜ ಒಡೆಯರವರು ಕಟ್ಟಿಸಿದ್ದಾರೆ.

ಶ್ರೀರಾಮದೇವರ ರಥೋತ್ಸವವು ಮಕರ ಸಂಕ್ರಾಂತಿ ಕಳೆದ ಬಗ್ಗೆ ನಡೆಯುತ್ತದೆ. ಜನವರಿ ಒಂದನೇ ತಾರೀಖಿನಿಂದ ಹದಿನೈದು ದಿನಗಳ ಕಾಲ ಬಾರಿ ದನಗಳ ಜಾತ್ರೆ ನಡೆಯುತ್ತದೆ. ಈ ಜಾತ್ರೆಯು ರಾಜ್ಯದ ಪ್ರಮುಖ ಜಾತ್ರೆಗಳಲ್ಲಿ ಒಂದಾಗಿದ್ದು ರಾಜ್ಯದ ವಿವಿಧ ಮೂಲೆಗಳಿಂದ ಅಂದರೆ ದಾವಣಗೆರೆ, ಧಾರವಾಡ, ಹುಬ್ಬಳಿ, ರಾಣಿ ಬೆನ್ನೂರು,

ಗದಗ, ರಾಯಚೂರು, ಕೊಪ್ಪಳಗಳ ಕಡೆಯಿಂದ ತಮ್ಮ ರಾಸುಗಳ ಜೊತೆಯಲ್ಲಿ ಜಾತ್ರೆಗೆ ಆಗಮಿಸುತ್ತಾರೆ.

ಈ ಜಾತ್ರೆ ಈ ಭಾಗದ ಜನತೆಯ ಸಾಂಸ್ಕೃತಿಕ ಹಬ್ಬವಾಗಿದ್ದು, ಹಿಂದೆ ಮೈಸೂರು ಅರಸರು ರಥೋತ್ಸವಕ್ಕೆ ಆಗಮಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಜಾತ್ರೆಯಲ್ಲಿ ರಾಜಕೀಯ ಪ್ರತಿನಿಧಿಗಳು ಪ್ರಮುಖವಾಗಿ ಪಾಲ್ಗೊಳ್ಳುತ್ತಾರೆ. ಜೊತೆಗೆ ವಿವಿಧ ಜಾತಿಯ ಜನಾಂಗದವರು ಪ್ರಮುಖವಾಗಿ ಬ್ರಾಹ್ಮಣರು, ಉಪ್ಪಾರ ಜನಾಂಗದವರು, ವೀರಶೈವರು ಜೊತೆಗೆ ದಲಿತರು, ಶೂದ್ರರೂ ಜಾತಿಬೇಧವಿಲ್ಲದೆ ಒಟ್ಟಾಗಿ ಬೆರೆತು ರಥೋತ್ಸವದಲ್ಲಿ ಪಾಲ್ಗೊಂಡು ಸಹಬಾಳ್ವೆಯನ್ನು ಸೌಹಾರ್ದತೆಯನ್ನು ಪ್ರದರ್ಶಿಸುತ್ತಾರೆ. ಎಲ್ಲರೂ ಒಟ್ಟಾಗಿ ಸೇರಿ ಜಾತ್ರೆಯನ್ನು ಸಡಗರ ಸಂತೋಷದಿಂದ ಆಚರಿಸುತ್ತಾರೆ. ಹಾಗೆಯೇ ವಿವಿಧ ಇಲಾಖೆ ವಸ್ತುಪ್ರದರ್ಶನ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುತ್ತವೆ. ಇತ್ತೀಚಿನ ದಿನಗಳಲ್ಲಿ ಅನ್ನ ಸಂತರ್ಪಣಾ ಕಾರ್ಯಕ್ರಮವನ್ನು ಆಯೋಜಿಸಲಾಗಿದ್ದು ಎಲ್ಲರೂ ಒಟ್ಟಾಗಿ ಸಹಪಂಕ್ತಿ ಊಟವನ್ನು ಮಾಡುವ ವ್ಯವಸ್ಥೆಯನ್ನು ಮಾಡಲಾಗಿದೆ.

ರೈತರೆಲ್ಲರೂ ತಮ್ಮ ದುಃಖ, ನೋವು, ನಿರಾಸೆಗಳನ್ನು ಮರೆತ ಆ ದಿನ ಸಂಭ್ರಮದಿಂದ ತಮ್ಮ ಕುಟುಂಬದ ಸದಸ್ಯರೊಂದಿಗೆ ಬೆರೆತು ಜಾತ್ರಾಮಹೋತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ಮಕ್ಕಳಿಗೆ ಆಟಿಕೆಗಳನ್ನು ಕಡಲೆಪುರಿ, ಸಿಹಿತಿಂಡಿಗಳನ್ನು ಕೊಡಿಸುತ್ತಾರೆ. ಮಹಿಳೆಯರು ಬಳೆಗಳ ಅಂಗಡಿಗಳಲ್ಲಿ ಬಳೆಗಳನ್ನು ತೊಡಿಸಿಕೊಂಡು ತಮ್ಮ ಮುತ್ತೈದೆ ಭಾಗ್ಯಕ್ಕೆ ಆನಂದ ವ್ಯಕ್ತಪಡಿಸುತ್ತಾರೆ. ಜಾತ್ರೆಯಲ್ಲಿ ಅನೇಕ ಬಗೆಯ ವಿವಿಧ ಬಗೆಯ ಅಂಗಡಿಗಳು ರಾಜಾಜಿಸುತ್ತಿರುತ್ತವೆ. ಆಟಿಕೆಯ ಅಂಗಡಿಗಳು, ಬಳೆಗಳ ಅಂಗಡಿಗಳು, ಜಾದೂ ಪ್ರದರ್ಶನಗಳು, ಹಚ್ಚೆ ಹಾಕಿಸಿಕೊಳ್ಳುವ ಅಂಗಡಿಗಳು, ಹಣ್ಣು-ಜವನ, ಹೂವಿನ ಅಂಗಡಿಗಳು, ಬಲೂನಿನ ಅಂಗಡಿಗಳು, ಸಿಹಿತಿಂಡಿ, ಕಡಲೇಪುರಿಯ ಅಂಗಡಿಗಳು ಎಲ್ಲೆಲ್ಲೂ ಕಂಡುಬರುತ್ತವೆ. ಮಕ್ಕಳು, ದೊಡ್ಡವರು, ಚಿಕ್ಕವರು ಎಂಬ ಬೇಧಬಾವವಿಲ್ಲದೆ ಜಾತಿ, ಧರ್ಮಗಳ ವ್ಯತ್ಯಾಸವಿಲ್ಲದೆ ಎಲ್ಲರೂ ಸಂತೋಷದಿಂದ ಬೆರೆತು ಜಾತ್ರಾ ಮಹೋತ್ಸವದ ಸಡಗರ ಸಂತೋಷದ ಕ್ಷಣಗಳನ್ನು ಕಳೆಯುತ್ತಾರೆ.

ಜಾತ್ರೆಯಲ್ಲಿನ ಮತ್ತೊಂದು ವಿಶೇಷವೆಂದರೆ ಅಂದು ಅನೇಕ ಕಲಾತಂಡಗಳು ವಿವಿಧ ಬಗೆಯ ವೇಷಭೂಷಣಗಳನ್ನು ಧರಿಸಿ ರಂಗುರಂಗಿನ ನೋಟಗಳಿಗೆ ಒಳಗಾಗುತ್ತಾರೆ. ಜನಪದ ಕಲೆಗಳನ್ನು ಪ್ರದರ್ಶಿಸುತ್ತಾರೆ. ಜಾತ್ರೆಯದಿನ ರಾತ್ರಿ ಪೌರಾನಿಕ ನಾಟಕವನ್ನು ಏರ್ಪಡಿಸುತ್ತಾರೆ.




ಶ್ರೀರಾಮದೇವಾಲಯದ ರಾಜಗೋಪುರ



ತೇರು ಎಳೆಯುತ್ತಿರುವ ದೃಶ್ಯ



ಜಾತ್ರೆಯಲ್ಲಿ - ಭಾಗವಹಿಸಿರುವ ಜನಸ್ತೋಮ



ತುಂಬಿ ಹರಿಯುತ್ತಿರುವ ಧನುಷ್ಕೋಟಿ



ಗರ್ಭಗುಡಿಯಲ್ಲಿನ ಮೂಲ ವಿಗ್ರಹಗಳು



'ಸೀತಾಮಡು'



ಉತ್ಸವಮೂರ್ತಿಗಳು



ಡೋಲೋತ್ಸವ

# ಅಧ್ಯಾಯ – ೭

# ಡೋರ್ನಹಳ್ಳಿ ಮಹಾಸಂತ ಅಂತೋಣಿಯವರ ಜಾತ್ರಾಮಹೋತ್ಸವ

## ಕ್ಷೇತ್ರದ ಇತಿಹಾಸ

ಕೃಷ್ಣರಾಜನಗರ ತಾಲ್ಲೂಕಿನಲ್ಲಿರುವ ಪ್ರಮುಖ ಯಾತ್ರಾಸ್ಥಳಗಳಲ್ಲಿ ಒಂದಾಗಿರುವ 'ಡೋರ್ನಹಳ್ಳಿ' ಗ್ರಾಮವು ತನ್ನದೇ ಆದ ವಿಶಿಷ್ಟ ಇತಿಹಾಸವನ್ನು ಹೊಂದಿದೆ.

ಕ್ರಿಶ್ಚಿಯನ್ ಸಮುದಾಯದವರೇ ಈ ಗ್ರಾಮದಲ್ಲಿ ನಎಲೆಸಿರುವ ಕಾರಣಕ್ಕೆ ಇದಕ್ಕೆ 'ಕ್ರಿಶ್ಚಿಯನ್ ಕೊಪ್ಪಲು' ಎಂದೂ ಕರೆಯಲಾಗುತ್ತದೆ. ಇಲ್ಲಿರುವ ಜಗತ್ಪ್ರಸಿದ್ಧ 'ಮ್ಹಾಸಂತ ಅಂತೋಣಿಯವರ ಚರ್ಚ್' ವಿಶೇಷತೆಗೆ ಇನ್ನಷ್ಟು ಮೆರಗನ್ನು ನೀಡಿದೆ.

ಡೋರ್ನಹಳ್ಳಿಯಲ್ಲಿ ಹಿಂದೂ ರೈತನೊಬ್ಬನು ತನ್ನ ರಾಗಿ ಹೊಲವನ್ನು ಉಳುತ್ತಿದ್ದಾಗ ಅವನ ನೇಗಿಲಿಗೆ ಏನೋ ಸಿಕ್ಕಿದಂತಾಯಿತು. ಎತ್ತುಗಳನ್ನು ನಿಲ್ಲಿಸಿ ಕಾಲಬುಡಕ್ಕೆ ದೃಷ್ಟಿಯನ್ನು ಹಾಯಿಸಿದ ಅದು ಮನುಷ್ಯಾಕೃತಿಯ ಒಂದು ಮರದ ಪ್ರತಿಮೆಯಾಗಿತ್ತು. ಒಂದಡಿ ಒಂದೂವರೆ ಅಂಗುಲ ಅದರ ಎತ್ತರವಾಗಿತ್ತು. ಆ ಪ್ರತಿಮೆಗೆ ಕೈಗಳಿರಲಿಲ್ಲ. ಯಾವುದೋ ಒಂದು ಆಟದ ಗೊಂಬೆ ಇರಬೇಕೆಂದು ಭಾವಿಸಿದ ಆ ರೈತ ಅದೇ ಪ್ರತಿಮೆ ಅಮೂಲ್ಯವಾದದ್ದು ಎಂದು ಅವನು ಕನಸು ಮನಸ್ಸಿನಲ್ಲಿಯೂ ಯೋಚಿಸಿರಲಿಲ್ಲ. ಮನೆಗೆ ಆ ಪ್ರತಿಮೆಯನ್ನು ತೆಗೆದುಕೊಂಡು ಹೋಗಿ ಮಕ್ಕಳ ಕೈಗೆ ಆಟವಾಡಲು ಗೊಂಬೆ ಎಂದುಕೊಟ್ಟನು.

ಒಂದು ರಾತ್ರಿ ಆ ರೈತ ಕಂಡ ಕನಡು ವಿಚಿತ್ರವಾಗಿತ್ತು. ಪ್ರತಿಮೆಯಂತೆ ಬಟ್ಟೆಯುಟ್ಟ ಸಂತನೊಬ್ಬನು ಕನಸಿನಲ್ಲಿ ಬಂದಂತಿತ್ತು. ಕ್ರೈಸ್ತರು ಭಕ್ತಿ ಆದರಗಳಿಂದ ಜಗತ್ತಿನಾದ್ಯಂತ ಗೌರವಿಸುವ ಪ್ರಸಿದ್ಧ ಸಂತನ ಪ್ರತಿಮೆ ಅದೆಂದು, ಅದನ್ನು ಹೀನಾಮಾನವಾಗಿ ಉಪಯೋಗಿಸುವುದು ಸಲ್ಲದೆಂದು ಆ ಸಂತನು ಹೇಳಿದಂತೆ ರೈತನಿಗೆ ಅನ್ನಿಸಿತು. ಅಲ್ಲದೆ ಪ್ರತಿಮೆ ದೊರಕಿದ ಸ್ಥಳದಲ್ಲೆ ತನಗಾಗಿ ಒಂದು ಪ್ರತ್ಯೇಕ ದೇವಾಲಯವನ್ನು ಕಟ್ಟಿಸಬೇಕು. ಆಗ ರೈತನು ಮತ್ತವನ ಕುಟುಂಬವು ಸಂತನ ಕೃಪಾವರಗಳಿಗೆ ಪಾತ್ರರಾಗುವರು. ಇದನ್ನು ನಿರ್ಲಕ್ಷಿಸಿದರೆ ಪರಿಣಾಮಗಳು ಬೇರೆಯಾಗುವುದು ಎಂಬ ಎಚ್ಚರಿಕೆಯನ್ನು ಆ ಕುರುಹು ಕೊಟ್ಟಂತಿತ್ತು. ಕನಸಿನ ವಿಚಾರಗಳಿಗೆ ರೈತನು ಯಾವ ಗಮನವನ್ನೂ ಕೊಡಲಿಲ್ಲ. ಪವಿತ್ರ ಪ್ರತಿಮೆಯು ಮಕ್ಕಳ ಗೊಂಬೆಯಾಗಿಯೇ ಉಳಿಯಿತು. ಆದರೆ ಮಕ್ಕಳು ತಮಗೆ ಇಷ್ಟಬಂದಂತೆ ಆ ಪ್ರತಿಮೆಯನ್ನು ಬಳಸಿ ಚಲ್ಲಾಟವಾಡಿದರು. ಆದರೆ ಒಂದು ವರ್ಷದೊಳಗೆ ಆ ರೈತನ

ಎರಡು ಎತ್ತುಗಳು ಸತ್ತುಹೋದವು. ಅವನ ಕುಟುಂಬದಲ್ಲಿ ಒಬ್ಬರ ನಂತರ ಇನ್ನೊಬ್ಬರಾದಿಯಾಗಿ ತೀರಿಕೊಂಡರು. ಇದಕ್ಕೆ ಯಾವ ಕಾಯಿಲೆಯೂ ಕಾರಣವಾಗಿರಲಿಲ್ಲ. ಈ ಅಕಾಲಿಕ ಮೃತ್ಯುವಿಗೆ ಕನಸಿನಲ್ಲಿ ಸಂತನು ಆಜ್ಞಾಪಿಸಿದ ಕರ್ತವ್ಯವನ್ನು ಈಡೇರಿಸದೇ ಇದ್ದುದು ಹಾಗೂ ಕೊಟ್ಟ ಎಚ್ಚರಿಕೆಯನ್ನು ನಿರ್ಲಕ್ಷಿಸಿದ ಕಾರಣ ತನಗೆ ಈ ದುರಂತ ಒದಗಿದೆ ಎಂದು ಆ ರೈತ ಆಗಮನಗೊಂಡನು. ಅವನ ಕಳವಳ ಹೇಳತೀರದಾಯಿತು. ಇನ್ನೂ ಹೆಚ್ಚಿನ ದುರಂತಗಳು ಬರಬಹುದೇನೋ ಎಂದು ಸಂತನ ಇಷ್ಟಾರ್ಥವನ್ನು ನೆರವೇರಿಸಲು ನಿರ್ಧರಿಸಿದನು. ಪಾಂಡಿಚೇರಿಯಿಂದ ಕ್ರೈಸ್ತ ಗುರುವೊಬ್ಬನು ಬೆಂಗಳೂರು ಮೈಸೂರಿಗೆ ವರ್ಷಕ್ಕೊಮ್ಮೆ ಭೇಟಿಕೊಡುವ ಪರಿಪಾಠವಿಟ್ಟುಕೊಂಡಿದ್ದನು. ಈ ರೈತ ಆ ಗುರುಗಳನ್ನು ಆಕಸ್ಮಿಕವಾಗಿ ಮೈಸೂರಿನಲ್ಲಿ ಭೇಟಿಯಾದನು. ತನ್ನ ಹಳ್ಳಿಗೆ ದಯಮಾಡಿಸಬೇಕೆಂದು ಅವರನ್ನು ಆಹ್ವಾನಿಸಲು ಗುರುಗಳು ಸಮ್ಮತಿಸಿದರು.

ಡೋರ್ನಹಳ್ಳಿಗೆ ಗುರುಗಳು ಆಗಮಿಸಲು, ರೈತ ತನ್ನೊಡನಿದ್ದ, ಅಮೂಲ್ಯ ನಿಧಿ ಮರದ ಪ್ರತಿಮೆಯನ್ನು ಗುರುವಿನ ವಶಕ್ಕೆ ಕೊಟ್ಟನು. ಅದು ಲಭಿಸಿದ ಬಗೆ, ಅನಂತರ ನಡೆದ ಘಟನೆಗಳ ಪೂರ್ಣ ವಿವರಣೆಯನ್ನು ಹೇಳಿ, ಆ ಪ್ರತಿಮೆ ಸಿಕ್ಕಿದ ಸ್ಥಳದಲ್ಲಿಯೇ ಒಂದು ಪುಟ್ಟ ಪುಣ್ಯಕ್ಷೇತ್ರವನ್ನು ನಿರ್ಮಿಸಿದನು. ಆ ದಿನದಿಂದ ರೈತನ ಕುಟುಂಬಕ್ಕೆ ನೆಮ್ಮದಿ, ಸುಖ, ಸಂಪತ್ತು ಹೇರಳವಾಗಿ ಲಭಿಸಿತು. ಡೋರ್ನಹಳ್ಳಿಯಲ್ಲಿ ನಡೆದ ಈ ಘಟನೆಗಳ ವದಂತಿ ಸುತ್ತಮುತ್ತಲಿನ ಹಳ್ಳಿಗಳಿಗೆ ಹಬ್ಬಿತು. 'ತರಗೆಲೆಗಳಲ್ಲಿ ಬೆಂಕಿ ಸಂಚರಿಸಿದಂತೆ' ಅವರು ಎದುರಿಸಬೇಕಾಗಿದ್ದ ಅಡ್ಡಿ, ತಡೆಗಳು ಅಷ್ಟಿಷ್ಟಲ್ಲ. ಆದರೂ ಪುಣ್ಯಕ್ಷೇತ್ರಕ್ಕೆ ಬಂದು ಡೋರ್ನಹಳ್ಳಿ ಮ್ಹಾಸಂತ ಅಂತೋಣಿಯವರ ಮುಖಾಂತರ ದೇವರ ಆಶೀರ್ವಾದಗಳನ್ನು ಪಡೆದರು.

'ಡೋರ್ನಹಳ್ಳಿಯ ಅದ್ಭುತಶಾಲಿ ಅಂತೋಣಿ' ಎಂದು ಆ ಪುಟ್ಟ ಪ್ರತಿಮೆ ಪ್ರಸಿದ್ಧವಾಗತೊಡಗಿತು. ಅನೇಕ ಜನರು ಹರಕೆ ಹೊತ್ತು ತಮ್ಮ ಅವಶ್ಯಕತೆಗಳಿಗಾಗಿ ಬೇಡಿಕೊಂಡರು. ತಮ್ಮ ಕಷ್ಟ ಸಂಕಷ್ಟಗಳನ್ನು ಸಂತನಲ್ಲಿ ಹೇಳತೊಡಗಿದರು. ಸಂತರು ತನ್ನನ್ನು ನಂಬಿದ್ದವರನ್ನು ಕೈಬಿಡಲಿಲ್ಲ. ಅವರಿಗಾಗಿ ಕರ್ತರಲ್ಲಿ ಪ್ರಾರ್ಥಿಸಿ ನಾನಾ ಬಗೆಯ ಶಾರೀರಿಕ ಹಾಗೂ ಆತ್ಮಕ ವರಗಳನ್ನು ದಯಪಾಲಿಸಿದರು. ಸಂಕಷ್ಟಗಳನ್ನು ಪರಿಹಾರ ಮಾಡಿ ಅವಶ್ಯಕತೆಗಳನ್ನು ಈಡೇರಿಸಿದರು.

ದಿನಗಳು ಉರುಳಿದಂತೆ ಯಾತ್ರಿಕರ ಸಂಖ್ಯೆ ಹೆಚ್ಚಾಗ ತೊಡಗಿತ್ತು. ಆದುದರಿಂದ ಪ್ರಾರಂಭದಲ್ಲಿ ನಿರ್ಮಿಸಿದ ಪುಣ್ಯಕ್ಷೇತ್ರದ ಕಿರುಕಟ್ಟಡ ಸಾಲದಾಯಿತು.

ಇನ್ನೊಂದು ಕಟ್ಟಡವನ್ನು ಕಟ್ಟಲಾಯಿತು. ಕೆಲವು ಕಾಲದ ನಂತರ, ಅದು ಸಹ ಕಿರಿದೆನಿಸಿತು. ಆದುದರಿಂದ ಆ ಕಟ್ಟಡವನ್ನು ಅಲ್ಲಿರುವ ಗುರುವಿಗೆ ವಸತಿಗೃಹವನ್ನಾಗಿ ಪರಿವರ್ತಿಸಿ ಮತ್ತೊಂದು ಕಟ್ಟಡವನ್ನು ಕಟ್ಟಲಾಯಿತು. ಆ ಕಟ್ಟಡವೇ ಡೋರ್ನಹಳ್ಳಿಯ ದೇವಾಲಯವಾಯಿತು.

ಡೋರ್ನಹಳ್ಳಿ ಎಂಬುದು ಮೈಸೂರಿನ ಒಂದು ಮೂಲೆಯಲ್ಲಿದ್ದ ಒಂದು ಸ್ಥಳ. ಆದರೆ ಇಂದು ಅದು ಒಂದು ಪ್ರಮುಖ ಯಾತ್ರಾಸ್ಥಳವಾಗಿದೆ. ಡೋರ್ನಹಳ್ಳಿ ಮ್ಹಾಸಂತ ಅಂತೋಣಿಯವರು, ಹಿಂದುಗಳಿದ್ದ ಹಳ್ಳಿಯೊಂದರಲ್ಲಿ ತಮ್ಮ ಮಹಿಮೆ, ಪ್ರತಾಪ ಪ್ರೇಮಹಾರಗಳನ್ನು ಅಭಿವ್ಯಕ್ತಗೊಳಿಸಿರುವರು. ಸಹಸ್ರಾರು ಭಕ್ತಾದಿಗಳಿಗೆ ಅವರು ಆಶ್ರಯರಾಗಿರುವರು. ಅವರ ಆಶ್ರಯವನ್ನರಸಿ ಹೋದವರಿಗೆ ಅವರಿತ್ತ ಶಾರೀರಿಕ ಹಾಗೂ ಆಧ್ಯಾತ್ಮಿಕ ವರದಾನಗಳು. ಅಸಂಖ್ಯಾತ, ಡೋರ್ನಹಳ್ಳಿಯ ಸಂತ ಅಂತೋಣಿಯವರ ಮೂಲಕ ಭಕ್ತರ ಕೋರಿಕೆಗಳಿಗೆ ಲಭಿಸಿದ. ಆಶೀರ್ವಾದಗಳನ್ನು ಪ್ರತಿ ತಿಂಗಳು, ಮೈಸೂರು ಧರ್ಮಕ್ಷೇತ್ರದಿಂದ ಹೊರಡುವ "ದೂತ" ಪತ್ರಿಕೆಯಲ್ಲಿ ಪ್ರಕಟವಾಗುತ್ತದೆ. ಕಳೆದುಹೋದ ವಸ್ತುಗಳನ್ನು ಮತ್ತೆ ಪಡೆದ ಪ್ರಸಂಗಗಳು, ಗುಣವಾದ ವ್ಯಾಧಿಗಳು, ನಿರುದ್ಯೋಗಿಗಳು ಉದ್ಯೋಗ ಗಳಿಸಿಕೊಳ್ಳುವುದು, ನ್ಯಾಯಾಲಯದಲ್ಲಿ ಜಯ, ಸಂತಾನವಿಲ್ಲದ ದಂಪತಿಗಳು ಮಕ್ಕಳನ್ನು ಪಡೆದ ವಿಷಯಗಳು ಹೀಗೆ ನಾನಾ ಬಗೆಯ ಅವಶ್ಯಕತೆಗಳನ್ನು ಡೋರ್ನಹಳ್ಳಿಯ ಮ್ಹಾಸಂತ ಅಂತೋಣಿಯವರ ವಿಚಾರಗಳು "ದೂತ" ಪತ್ರಿಕೆಯಲ್ಲಿ ಪ್ರಕಟವಾಗುತ್ತದೆ.

ಪ್ರಾರಂಭದಲ್ಲಿ ಮರದ ಪ್ರತಿಮೆ ಮಾತ್ರವಲ್ಲದೆ, ಡೋರ್ನಹಳ್ಳಿಯಲ್ಲಿ ಈಗ ಸಂತ ಅಂತೋಣಿಯವರ ಎರಲುಬಿನ ಒಂದು ಚೂರನ್ನು ಈ ಪುಣ್ಯಕ್ಷೇತ್ರದಲ್ಲಿ ಇಡಲಾಗಿದೆ. ಭಾರತದಾದ್ಯಂತ ಡೋರ್ನಹಳ್ಳಿಯ ಮಹಿಮೆ ಈಗ ಹಬ್ಬಿದೆ. ನಾಡಿನ ಮೂಲೆ ಮೂಲೆಗಳಿಂದ ಪ್ರಾರ್ಥನೆಗಳಿಗಾಗಿ ಅನೇಕ ಜನರು ಪ್ರತಿದಿನ ಬಂದುಹೋಗುತ್ತಾರೆ. ಡೋರ್ನಹಳ್ಳಿಯ ಸಂತ ಅಂತೋಣಿಯವರ ಸಹಾಯಕೋರಿ ಧರ್ಮ ಕೇಂದ್ರದ ಗುರುವಿಗೆ ಪತ್ರ ಬರೆಯುತ್ತಾರೆ ಹಾಗು ಕಾಣಿಕೆಗಳನ್ನು ಕಳುಹಿಸಿಕೊಡುತ್ತಾರೆ. ಸಂತ ಅಂತೋಣಿಯವರ ಆಶ್ರಯ ಕೋರಿ ಬರುವ ಜನರು ಎಂದೂ ನಿರಾಶರಾಗಿಲ್ಲ. ಅವರು ಹೊತ್ತ ಹರಕೆಗಳು ಎಂದೂ ನಿಷ್ಫಲವಾಗಿಲ್ಲವೆಂದು ಇಲ್ಲಿನ ಜನರು ಹೇಳುವುದುಂಟು.

### ಸಂತ ಅಂತೋಣಿಯವರ ಸಂಕ್ಷಿಪ್ತ ಜೀವನ ಚರಿತ್ರೆ

ಪೋರ್ಚುಗಲ್ ದೇಶದ ಲಿಸ್ಬನ್ ನಗರದಲ್ಲಿ ಕುಲೀನ ಮನೆತನದಲ್ಲಿ ಕ್ರಿ.ಶ.೧೧೯೫ನೇ ಆಗಸ್ಟ್ ೧೫ರಂದು (೧೧೯೫, ೧೫) ಅಂತೋಣಿಯವರ

ಜನನವಾಯಿತು. ಅವರ ತಂದೆಯಾದ ಮಾರ್ಟಿನ್ ಲೇಬಿಯೋ, ಲಿಸ್ಬನ್ ನಗರದಲ್ಲಿ ಉನ್ನತ ಅಧಿಕಾರಿಯಾಗಿದ್ದರು. ಶ್ರೀಮಂತಿಕೆಯೊಂದಿಗೆ ಸದ್ಗುಣ ಸಂಪನ್ನನೂ ಆಗಿದ್ದು ಕೀರ್ತಿಗಳಿಸಿದ್ದ ನಗರದ ಪ್ರಭುವಾಗಿದ್ದರು. ತಾಯಿಯಾದ ಡೋನಾ ಮರಿಯ ಪತಿಗೆ ತಕ್ಕ ಸತಿಯಾಗಿ ಸದ್ಗುಣಶೀಲೆಯಾಗಿದ್ದರು. ಇವರ ಜೇಷ್ಠ ಕುಮಾರನು ಫರ್ದಿನಾಂಡೆ, ಅನಂತರ ಸನ್ಯಾಸಿ ಸಭೆಗೆ ಸೇರಿದಾಗ ಅಂತೋಣಿ ಎಂದು ಹೆಸರು ಸ್ವೀಕರಿಸಿದರು. ಅಂತೋಣಿಯವರಿಗೆ ಇಬ್ಬರು ಸಹೋದರರು ಹಾಗೂ ಇಬ್ಬರು ಸಹೋದರಿಯರು ಇದ್ದರು. ಅವರಲ್ಲಿ ಒಬ್ಬಳು ಕನ್ಯಾಸ್ತ್ರೀಯಾಗಿ ದೇವರ ಸೇವೆಯಲ್ಲಿ ನಿರತರಾಗಿದ್ದರು. ಸದ ಗೃಹಸ್ಥರಾಗಿ ಪರಂಧಾವಂಗೈದರು.

ಅಂತೋಣಿಯವರು ಬಾಲಕನಾಗಿದ್ದಾಗಲೇ ದೇವರ ವಿಶೇಷ ವರಪ್ರಸಾದಗಳನ್ನು ಪಡೆದಿರುವುದನ್ನು ನಾವು ಅವರ ಆತ್ಮಚರಿತ್ರೆಯ ಮೂಲಕ ತಿಳಿದುಕೊಳ್ಳಬಹುದು. ಅವರ ೧೫ನೇ ವಯಸ್ಸಿನಲ್ಲಿ ಒಂದು ಘಟನೆ ನಡೆಯಿತು. ಅಂತೋಣಿಯವರು ತಮ್ಮ ಊರಿನ ದೇವಾಲಯದಲ್ಲಿದ್ದು ಜಪದಲ್ಲಿ ಮಗ್ನರಾಗಿದ್ದರು. ಆ ಸಮಯದಲ್ಲಿ ಭಯಾನಕ ಆಕೃತಿಯೊಂದು ಅವರ ಕಣ್ಣಮುಂದೆ ಸುಳಿಯಿತು. ಅದು ಅವಲಕ್ಷಣದ ಮೂರ್ತಿಯಂತಿತ್ತು. ಜಪದಲ್ಲಿ ನಿರತನಾಗಿದ್ದ ಬಾಲಕನನ್ನು ನಾನಾ ಬಗೆಯಲ್ಲಿ ಅದು ಪ್ರಲೋಭನೆ ಕೊಡತೊಡಗಿತ್ತು. ಆದರೆ ಅಂತೋಣಿಗೆ ಈ ಕುರೂಪಿಯು ದುಷ್ಪ್ರೇರಣೆ ಕೊಡಲು ಬಂದಿರುವ ಪಿಶಾಚಿಯೆಂದು ತಿಳಿದಿತ್ತು. ಅದಕ್ಕಾಗಿ ತಾವು ಮೊಣಕಾಲಿನಲ್ಲಿದ್ದ ಸ್ಥಳದಲ್ಲಿ ತಮ್ಮ ಬೆರಳಿನಿಂದ, ಹಾಸಿದ ಹಾಲುಗಲ್ಲಿನ ಮೇಲೆ ಶಿಲುಬೆಯ ಗುರುತನ್ನು ಬರೆದರು. ಅವರ ಬೆರಳು ಚಲಿಸಿದಂತೆಯೇ ಹಾಲುಗಲ್ಲು ಕೊರೆದು ಅಚ್ಚಳಿಯದ ಶಿಲುಬೆಯ ಗುರುತು ಅಲ್ಲಿ ಮೂಡಿತು. ಪಿಶಾಚಿ ಪಲಾಯನ ಸೂತ್ರ ಪಠಿಸಿತು. ಅಂತೋಣಿಯ ಪೂಜ್ಯವ್ಯಕ್ತಿತ್ವಕ್ಕೆ ಲಭಿಸಿದ ಮೊದಲನೆಯ ಸಾಕ್ಷಿ ಇದು. ಈ ಸಂಗತಿ ನಡೆದ ಕೆಲಕಾಲದ ತರುವಾಯ ಅಂತೋಣಿಯವರು ಮಠದ ಸನ್ಯಾಸಿಯಾಗಲು ನಿಶ್ಚಯಿಸಿದರು. ಈ ಲೋಕದ ಆಸೆಆಮಿಷಗಳನ್ನು ತ್ಯಜಿಸಿ ತಮ್ಮ ಸಂಪೂರ್ಣ ಜೀವನವನ್ನು ಪರಮಾತ್ಮನ ಸೇವೆಗಾಗಿ ಮುಡಿಪಾಗಿಡುವ ಮಹೋದ್ದೇಶದಿಂದ ಅವರು ಕೈಗೊಂಡ ನಿರ್ಧಾರ ಇದಾಗಿತ್ತು. ಲಿಸ್ಬೊಲಿನ ಸಂತ ವಿನ್ಸೆಸ್ಸಿಯವರ ಮಠದ ವಾಸಿಗಳಾಗಲು ಅವರು ಮಠಕ್ಕೆ ತೆರಳಿದರು. ಅಂತೋಣಿಯವರು ಮನೆಯನ್ನು ತ್ಯಜಿಸಿದರೂ, ಅವರ ಆಪ್ತೇಷ್ಟರು ಹಾಗೂ ಹಿತಚಿಂತಕರು ಅವರ ಬೆನ್ನು ಬಿಡಲಿಲ್ಲವಂತೆ. ಮಠದಲ್ಲಿ ಪದೇ ಪದೇ ಅವರನ್ನು ಭೇಟಿಮಾಡಿ ಕ್ಷೇಮ ವಿಚಾರಿಸಿಕೊಂಡು ಹೋಗುತ್ತಿದ್ದರಂತೆ, ಬಂಧು ಮಿತ್ರರ ಈ ವರ್ತನೆ ಅಂತೋಣಿಯವರಿಗೆ ಹಿಡಿಸಲಿಲ್ಲ. ಏಕಾಂತದಲ್ಲಿದ್ದು, ಪರಮಾತ್ಮನ ಧ್ಯಾನದಲ್ಲಿರಲು ಅಂತೋಣಿಯವರು ಆಶಿಸಿದರು.

ಆದರೆ ಸ್ವಂತದವರಿಂದ ಈ ಯೋಜನೆಗೆ ತೊಡಕು ಬಂದಿತ್ತು. ಇದರಿಂದ ಪಾರಾಗಲು ಅಂತೋಣಿಯವರು ನಿರ್ಧರಿಸಿ ಮಠದ ಶ್ರೇಷ್ಠರ ಅನುಮತಿಯನ್ನು ಪಡೆದು ಲಿಸ್ಬೊನ್ ನಗರದ ಮಠದಿಂದ ದೂರದ ಕೊಯಿಂಬ್ರ ದೇಶದ ಪವಿತ್ರ ಶಿಲುಬೆಯ ಮಠವನ್ನು ಸೇರಿಕೊಂಡರು. ಈ ಹೊಸ ಸ್ಥಳದಲ್ಲಿ ಅಂತೋಣಿಯವರಿಗೆ ಯಾವ ಬಗೆಯ ತೊಡಕುಗಳೂ ಇರಲಿಲ್ಲ. ಅವರ ವಿದ್ಯಾಭ್ಯಾಸವೂ ಅಚ್ಚುಕಟ್ಟಾಗಿ ಮುಂದುವರೆಯಿತು. ಜಪಧ್ಯಾನದಲ್ಲಿ ಕಾಲಕಳೆಯಲು ಸಕಲ ಸೌಲಭ್ಯಗಳು ಲಭಿಸಿದುವು. ಹೀಗೆ ಅವರ ಇಷ್ಟಾರ್ಥ ಕೈಗೂಡಿತು.

ಇವರು ಕೊಯಿಂಬ್ರಾ ದೇಶದಲ್ಲಿದ್ದಾಗ ಮೊರೊಕ್ಕೋ ದೇಶಕ್ಕೆ ಯಾತ್ರೆಗೆ ಹೋದರು. ಅಲ್ಲಿ ಐದು ಮಂದಿ ಸುಸಂದೇಶಕ್ಕಾಗಿ ರಕ್ತಸಾಕ್ಷಿಗಳಾಗಿ ಮಡಿದವರ ಪವಿತ್ರ ಶರೀರಗಳನ್ನು ಸನ್ಮಾನಿಸೆ ಹಿಂದಿರುಗಿದರು. ಆ ಸಂತರುಗಳು ಆಸಿಸೆಯ ಸಂತ ಫ್ರಾನ್ಸಿಸ್‌ರವರ ಮಠಕ್ಕೆ ಸೇರಿದವರಾಗಿದ್ದರು. ಅವರ ಸಭೆಗೆ ಸೇರಬೇಕೆಂಬ ಹಿರಿಯಾಸೆ ಅಂತೋಣಿಯವರಲ್ಲಿ ಹುಟ್ಟಿತು. ನಂತರ ಫ್ರಾನ್ಸಿಸ್‌ಕನ್ ಸಭೆಯನ್ನು ಸೇರಿದರು. ಕೂಡಲೇ ಮೊರೊಕ್ಕೋ ದೇಶದಲ್ಲಿ ಧರ್ಮಪ್ರಚಾರ ಕಾರ್ಯಕ್ಕಾಗಿ ತೆರಳಲು ಪ್ರವಾಸ ಕೈಗೊಂಡರು. ಆದರೆ ದಾರಿಯಲ್ಲಿ ಇವರ ದೇಹಾರೋಗ್ಯ ಕೆಟ್ಟುದುದರಿಂದ, ಸ್ಪೈನ್ ದೇಶಕ್ಕೆ ಹಿಂತಿರುಗಬೇಕಾಯಿತು. ದಾರಿಯಲ್ಲಿ ಹಡಗು ಬಿರುಗಾಳಿಗೆ ಸಿಕ್ಕಿ ಸಿಸಲಿ ದ್ವೀಪಕ್ಕೆ ಬಂದು ಸೇರಿದರು. ಇಲ್ಲಿ ಅವರು ಆರೋಗ್ಯ ಸುಧಾರಿಸಿ, ಅಲ್ಲಿಂದ ಆಸೆಸಿ ನಗರಕ್ಕೆ ಹೋಗುವ ಸನ್ನಿವೇಶ ಬಂತು, ಏಕೆಂದರೆ ಅಲ್ಲಿ ಅಸಿಸೆಯ ಸಭೆಯ ವಿಶೇಷ ಸಮ್ಮೇಳನ ನಡೆಯುತ್ತಿತ್ತು. ಅಂತೋಣಿಯವರ ವಿದ್ಯೆಯ ಪ್ರೌಢತೆಯ ಬಗ್ಗೆ ಅಲ್ಲಿ ನಎರೆದಿದ್ದವರಿಗೆ ಯಾವ ಸುಳಿವೂ ಇರಲಿಲ್ಲ. ಪರಿಣಾಮವಾಗಿ ಹಿರಿಯಾಧಿಕಾರಿಗಳ ಆಜ್ಞಾನುಸಾರವಾಗಿ ಅಲ್ಲಿ ಅವರು ಜಪಧ್ಯಾನಗಳಲ್ಲಿ ಕಾಲಕಳೆಯುತ್ತಾ ಸ್ವಪರಿಣತಿಯಲ್ಲಿ ಮುಂದುವರೆದರು.

ಒಮ್ಮೆ ಅಂತೋಣಿಯವರು ಧರ್ಮೋರ್ವ್ಯಾಖ್ಯಾಯ (ಪ್ರಬೋಧನೆ) ಮಾಡಬೇಕಾಯಿತು. ಅದನ್ನು ಕೇಳಿದ ಶ್ರೋತೃಗಳು ಕಣ್ಣೀರು ಸುರಿಸಿ, ಅದರ ವಿದ್ವತ್ತಿಗೆ ತಲೆದೂಗಿದರು. ಪ್ರಾಮಾಣಿಕ ಭಕ್ತಿಯ ಪ್ರಯುಕ್ತ ನಿರರ್ಗಳವಾಗಿ ಹರಿದುಬಂದ ಅವರ ದಾತ್ಥತಿಯನ್ನು ಕಂಡೆ ಅವರೆಲ್ಲರೂ ವಿಸ್ಮಯಗೊಂಡರು. ಅವರ ವಾಕ್ಚಾತುರ್ಯವನ್ನು ಕಂಡು ಸಂತೋಷಪಟ್ಟ ಅವರ ಧರ್ಮಾಧಿಕಾರಿಗಳು, ಅಂತೋಣಿಯವರನ್ನು ಅಧಿಕೃತ ಪ್ರಸಂಗಕಾರರನ್ನಾಗಿ ನೇಮಿಸಿದರು. ಅಂದಿನಿಂದ ಅಂತೋಣಿಯವರು ಆತ್ಮಗಳ ಸಂರಕ್ಷಣೆಗಾಗಿ ಅತ್ಯಾಸಕ್ತಿಯಿಂದ ಮುಂಪಾಲಿಯೆ, ರಿಮಿಸ ಮತ್ತು ಪಾದ್ವಾದೇಶಗಳಲ್ಲಿ ಧರ್ಮೋಪಖ್ಯಾನಗಳನ್ನು ಮಾಡತೊಡಗಿದರು. ಅವರ ಪ್ರಸಂಗಗಳನ್ನು ಕೇಳಿದ

ಸಾವಿರಾರು ಜನರು ತಮ್ಮ ಪಾಪಮಯ ಜೀವನಕ್ಕಾಗಿ ಪಾಶ್ಚಾತ್ತಾಪಪಟ್ಟು ಮನತಿರುಗಿದರು. ಭಯಭೀತಿಗಳಲ್ಲಿ ನಿತ್ಯ ನೆಲೆಯಾಗಿದ್ದ ಹೃನ್ಮಗಳಲ್ಲಿ ನಲಿವು, ನೆಮ್ಮದಿ ಶಾಂತಿಯನ್ನು ಕಂಡುಕೊಂಡರು.

ಅನೇಕರು ತಮ್ಮ ದ್ವೇಷ ಹಾಗೂ ಮತ್ಸರಗಳನ್ನು ತೂರೆದು ಸಂತೋಷದಿಂದ ಜೀವಿಸತೊಡಗಿದರು. ಎಷ್ಟೋ ದುಷ್ಟರು ಹಾಗೂ ಪಾಪಗಳು ಸತ್ಪಥದಲ್ಲಿ ನಡೆಯಲು ಪ್ರಾರಂಭಿಸಿದರು. ಅಂತೋಣಿಯವರು ಭಗವಂತನಿಂದ ಅದ್ಭುತಗಳನ್ನು ಮಾಡುವ ಶಕ್ತಿಯನ್ನು ಪಡೆದುಕೊಂಡಿದ್ದರು. ಅದರೊಂದಿಗೆ ಬಹುಭಾಷಾ ಪ್ರಾವೀಣ್ಯತೆಯನ್ನು ಕೂಡ ಪಡೆದಿದ್ದರು. ಅವರು ಯಾವುದಾದರೊಂದು ಭಾಷೆಯಲ್ಲಿ ಭಾಷಣ ಮಾಡಿದರೂ, ನೆರೆದ ಜನರು ತಮ್ಮ ಭಾಷೆ ಯಾವುದೇ ಇರಲಿ, ತಮ್ಮ ತಮ್ಮ ಭಾಷೆಯಲ್ಲಿ ಭಾಷಣವನ್ನು ಅರ್ಥಮಾಡಿಕೊಳ್ಳುತ್ತಿದ್ದರು.

ಒಂದೇ ವೇಳೆಯಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಅದ್ಬುತಗಳನ್ನು ಮಾಡುವ ಶಕ್ತಿ ಅವರಿಗಿತ್ತು. ಪಾಪಿಗಳನ್ನು ಸನ್ಮಾರ್ಗಕ್ಕೆ ತರುವ ಉದ್ದೇಶಕ್ಕಾಗಿ ಈ ಶಕ್ತಿಯನ್ನು ಅವರು ಬಳಸುತ್ತಿದ್ದರು. ಸಮುದ್ರದಲ್ಲಿರುವ ಮೀನುಗಳಿಗೆ ಅಂತೋಣಿಯವರು ಧರ್ಮೋಪದೇಶ ಮಾಡಲು ಅವುಗಳು ಇವರನ್ನು ಏಕಾಗ್ರತೆಯಿಂದ ಆಲಿಸಿದವು, ಇದರಿಂದ ಅನೇಕ ಪಾಪಿಗಳ ಬಗ್ಗೆ ಅನುಮಾನ ವ್ಯಕ್ತಪಡಿಸಿದ ಓರ್ವ ಅಧರ್ಮಿಯನ ಮುಂದೆಯೇ, ಹೇಸರ ಕತ್ತೆಯೊಂದು ಪರಮ ಪ್ರಸಾದದ ಸತ್ಯತೆಯನ್ನು ಸಮರ್ಥಿಸಿದರು. ಅಪಮಾನಕ್ಕೆ ಒಳಗಾಗಿದ್ದ ತಾಯೋರ್ವಳ ಮಾನವನ್ನು ಸಂರಕ್ಷಿಸಲು ಆಕೆಯ ಹಸುಕೂಸನ್ನು ಮಾತನಾಡಿಸಿ ಅಪರಾಧವನ್ನು ಪರಿಹರಿಸಿದರು. ಪಾದ್ವಾದೇಶದಲ್ಲಿ ಬೋಧಿಸುತ್ತಿರುವಾಗಲೇ ನಗರದಲ್ಲಿ ಅದ್ಭುತ ರೀತಿಯಿಂದ ಪ್ರತ್ಯಕ್ಷರಾಗಿ ಸತ್ತವನೊಬ್ಬನನ್ನು ಸಜೀವಗೊಳಿಸಿ ಆತನ ತಂದೆಯನ್ನು ಕೊಲೆ ಮಾಡಿದ ಪಾತಕ ಅವನದಲ್ಲವೆಂದು ರುಜುಪಡಿಸಿದರು. ನೆಲ, ಜಲ, ಭೂ, ವನಮೃಗ ಮುಂತಾದವುಗಳು ಅಂತೋಣಿಯವರ ಮಾತನ್ನು ಮನ್ನಿಸುತ್ತಿದ್ದವು. ಯೇಸು ಬಾಲರು ಅವರ ಜಪದ ಪುಸ್ತಕದ ಮೇಲೆ ಪವಡಿಸಿ ಸಂಭಾಷಿಸುತ್ತಿದ್ದುದು ಅಂತೋಣಿಯವರ ಅದ್ವಿತಿಯ ಹಿರಿಮೆಗೆ ಒಂದು ಸಾಕ್ಷಿ. ಹೀಗೆ ಸಂತ ಅಂತೋಣಿಯವರ ಜೀವನದ ಉದ್ದಕ್ಕೂ ಅನೇಕ ಅನೇಕ ಅದ್ಭುತಗಳು ನಡೆದಿದ್ದವು ಎಂದು ಸ್ಥಳೀಯರ ಅಭಿಪ್ರಾಯವಾಗಿದೆ.

**'ಡೋರ್ನಹಳ್ಳಿ ಜಾತ್ರೆ' ಒಂದು ನೋಟ**

ತನ್ನದೇ ಆದ ವಿಶಿಷ್ಟ ಇತಿಹಾಸವನ್ನು ಹೊಂದಿರುವ ಡೋರ್ನಹಳ್ಳಿ ಗ್ರಾಮವು ಕ್ರೈಸ್ತರ ಪವಿತ್ರ ಸ್ಥಳಗಳಲ್ಲಿ ಒಂದಾಗಿದ್ದು, ಇಲ್ಲಿ ಪ್ರತೀವರ್ಷ ಕ್ರೈಸ್ತಮತೀಯರು 'ಪೆಸ್ತೆ' ಅಂದರೆ ಜಾತ್ರೆಯನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ.

೨೦೦ ವರ್ಷಗಳ ಇತಿಹಾಸವಿರುವ ಇಲ್ಲಿನ ಜಾತ್ರೆಗೆ ದೇಶ-ವಿದೇಶಗಳಿಂದ ಜನರು ಬಂದು ಭಾಗವಹಿಸುತ್ತಾರೆ. ಇಡೀ ಕರ್ನಾಟಕದಲ್ಲಿಯೇ ಇದು ಪ್ರಾಚೀನವಾದ ಪುಣ್ಯಕ್ಷೇತ್ರ ಎಂಬ ಹೆಗ್ಗಳಿಕೆಗೂ ಪಾತ್ರವಾಗಿದೆ.

ಹಿಂದೂ ಧರ್ಮದಲ್ಲಿ ನಡೆಯುವಷ್ಟು ಬೇರೆ ಧರ್ಮಗಳಲ್ಲಿ ಜಾತ್ರೆ ನಡೆಯುವುದರ ಸಂಖ್ಯೆ ಕಡಿಮೆಯೇ ಎಂದೇಳಬಹುದು. ಕ್ರಿಶ್ಚಿಯನ್ ಜನಾಂಗದಲ್ಲಿಯೂ ಚರ್ಚ್ ವಾರ್ಷಿಕೋತ್ಸವಗಳು ನಡೆಯುತ್ತವೆಯೇ ಹೊರತು ಜಾತ್ರೆಗಳು ನಡೆಯುವುದು ಅಪರೂಪವೆಂದು ಹೇಳಬಹುದು. ಕೃಷ್ಣರಾಜನಗರ ತಾಲ್ಲೂಕಿನಲ್ಲಿ ಡೋರ್ನಹಳ್ಳಿ ಗ್ರಾಮವು ಪ್ರತೀವರ್ಷ ಜೂನ್ ತಿಂಗಳಿನ ೧೨ನೇ ತಾರೀಖಿನಂದು ಚರ್ಚ್ ವಾರ್ಷಿಕೋತ್ಸವವನ್ನು ಜಾತ್ರೆಯಾಗಿ ಅದ್ದೂರಿಯಾಗಿ ಆಚರಿಸುತ್ತಾರೆ.

ಜಾತಿಧರ್ಮಗಳ ಹಂಗಿಲ್ಲದೆ ಪ್ರತಿಯೊಬ್ಬರೂ ಸಹ ಈ ಒಂದು ಜಾತ್ರಾ ಮಹೋತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ಜೂನ್ ತಿಂಗ ೪ನೇ ತಾರೀಖಿನಿಂದ ೧೨ನೇ ತಾರೀಖಿನವರೆಗೂ ಚರ್ಚ್‌ನಲ್ಲಿ 'ನವೇನಾ' ಪೂಜೆಗಳು ನಡೆಯುತ್ತವೆ. 'ನವೇನೌ ಎಂದರೆ ೯ ದಿನಗಳ ಪ್ರಾರ್ಥನೆ ಎಂದರ್ಥ. ಈ ಪ್ರಾರ್ಥನೆಗೆ ಧರ್ಮಗುರುಗಳು ಭಾಗವಹಿಸುತ್ತಾರೆ. ಈ ಸಂದರ್ಭದಲ್ಲಿ ಧರ್ಮಗುರುಗಳು ಭಕ್ತರ ಕೋರಿಕೆಗಳಿಗಾಗಿ ವಿಶೇಷ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ನವೇನಾ ದಿನಗಳಲ್ಲಿ ಬಲಿಪೂಜೆ, ವಿಶೇಷ ಪ್ರಾರ್ಥನೆಗಳು, ಪ್ರಬೋಧನೆ, ಮೆರವಣಿಗೆ ಹಾಗೂ ಪರಮ ಪ್ರಸಾದದ ಆಶೀರ್ವಾದವಿರುವುದು. ಹಬ್ಬದ ದಿನದಂದು ವಿವಿಧ ಭಾಷೆಗಳಲ್ಲಿ ಬಲಿಪೂಜೆಗಳು ನಡೆಯುವುವು. ಕಾರಣ ಇಲ್ಲಿ ಅನೇಕ ಭಾಷೆಯನ್ನಾಡುವ ಜನರು ಬಂದು ಪೂಜೆ ಸಲ್ಲಿಸುವುದರಿಂದ ಈ ರೀತಿಯ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ನಂತರ ಗುರುಗಳಿಂದ ಪಾಪ ವಿಜ್ಞಾಪನೆಗಳನ್ನು ಕೇಳಲಾಗುವುದು. ಈ ರೀತಿ ತನ್ನದೇ ಆದ ವಿಶಿಷ್ಟ ವಿಧಿ-ವಿಧಾನಗಳನ್ನು ಈ ನವೇನಾ ಪೂಜೆಯಲ್ಲಿ ಆಚರಿಸಲಾಗುವುದು. ಆನಂತರ ಜೂನ್ ೧೩. ಅಂದರೆ ಜಾತ್ರೆಯ ದಿನದಂದು ಬೆಳಿಗ್ಗೆ ಅಂತೋಣಿಯವರ ಫ್ಲಾಗನ್ನು ಹಾರಿಸುವ (ಬಾವುಟ) ಮೂಲಕ ಜಾತ್ರೆ ಪ್ರಾರಂಭವಾಗುತ್ತದೆ. ಜಾತ್ರೆ ಪ್ರಾರಂಭವಾದ ಪ್ರತೀ ಗಂಟೆಗೆ ಬಲಿ ಪೂಜೆಗಳು ನಡೆದರೆ ಮೈಸೂರಿನ ಧರ್ಮಾಧ್ಯಕ್ಷರಿಂದ ಬೆಳಿಗ್ಗೆ ೧೧ ಗಂಟೆಗೆ ಆಡಂಬರದ ಬಲಿಪೂಜೆ ನಡೆಯುತ್ತದೆ. ನಂತರ ಅಂತೋಣಿಯವರು ವಿಗ್ರಹವನ್ನು ಅದು ದೊರೆತ ಸ್ಥಳದಿಂದ ಮೆರವಣಿಗೆ ಮೂಲಕ ಕರೆತಂದು ಚರ್ಚ್‌ಗೆ ಒಯ್ಯಲಾಗುತ್ತದೆ.

ಅನಂತರ ಅಂದು ಸಂಜೆ ಸಂತ ಅಂತೋಣಿಯವರ ವಿಗ್ರಹವನ್ನು ಹೊತ್ತ ತೇರು ಗ್ರಾಮದಲ್ಲಿ ಮೆರವಣಿಗೆ ಹೊರಡುತ್ತದೆ. ಆ ಮೆರವಣಿಗೆಯಲ್ಲಿ ಭಕ್ತಾದಿಗಳು ಕ್ಯಾಂಡಲ್ ಹೊತ್ತಿಸುವ ಮುಖಾಂತರ ಆ ವಿಗ್ರಹವನ್ನು ಪೂಜಿಸುತ್ತಾರೆ. ಉಪ್ಪು ಮತ್ತು ಕರಿ ಮೆಣಸನ್ನು ಹಾಗೂ ದುಡ್ಡನ್ನು ಎರಚುವ ಸಂಪ್ರದಾಯವೂ ಸಹ ಬಳಕೆಯಲ್ಲಿದೆ. ಇದೂ ಸಹ ಪೂಜೆಯ ಒಂದು ಆಚರಣೆಯಾಗಿ ಚಾಲ್ತಿಯಲ್ಲಿದೆ.

ಈ ರೀತಿ ತನ್ನದೇ ಆದ ವಿಶಿಷ್ಟ ಸಂಪ್ರದಾಯಗಳಿಂದ ಆಚರಿಸುವ ಈ ಜಾತ್ರೆಗೆ ದೇಶ-ವಿದೇಶಗಳಿಂದ ಜನರು ೧೨ ದಿನಗಳು ಮುಂಚಿತವಾಗಿಯೇ ಬಂದು ನೆಲೆಸಿ ತಮ್ಮ ಕೋರಿಕೆಯನ್ನೂ ಸಲ್ಲಿಸಿ ಹೋಗುತ್ತಾರೆ. ಅಂದು ತಾಲ್ಲೂಕಿನ ಶಾಲಾಕಾಲೇಜು-ಗಳಿಗೆ ಸಾರ್ವತ್ರಿಕ ರಜೆಯನ್ನೂ ನೀಡಿರಲಾಗಿರುತ್ತದೆ.



ದೋರ್ನಹಳ್ಳಿ ಚರ್ಚಿನ ವಿಹಂಗಮ ನೋಟ



ಚರ್ಚಿನ ಹಿಂಭಾಗದ ದೃಶ್ಯ

# ಅಧ್ಯಾಯ – ೮

# ಉಪಸಂಹಾರ

**ಮಾ**ನವ ತನ್ನ ಬದುಕಿನ ಆಶೋತ್ತರಗಳನ್ನು ಈಡೇರಿಸಿಕೊಳ್ಳುವ ನೆಪದಲ್ಲಿ ಹಬ್ಬ ಜಾತ್ರೆ ಇವುಗಳ ಆಚರಣೆಯನ್ನು ಮಾಡುತ್ತಾನೆ. ಸಮಾಜದ್ಲಲಿನ ಎಲ್ಲಾ ಜಾತಿವರ್ಗದ ಜನರಲ್ಲಿ ಐಕ್ಯತೆ ಮೂಡಿಸಲು ಜಾತ್ರೆಗಳು ಸಹಾಯಕವಾಗಿವೆ. ಪ್ರತಿನಿತ್ಯ ಸ್ಪೃಶ್ಯ–ಅಸ್ಪೃಶ್ಯ ಎಂದು ಭೇದಭಾವ ಮಾಡುವವರು ಜಾತ್ರೆಯ ದಿನ ಒಟ್ಟಿಗೆ ಬೆರೆತು ಜಾತ್ರೆ ನಡೆಸುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ 'ಜಾತ್ರೆ' ಎಲ್ಲೋ ಒಂದು ಕಡೆ ಸಮಾನತೆಯನ್ನು ತರಲು ಪ್ರಯತ್ನಿಸುತ್ತಿದೆಯೋ ಎಂದೆನಿಸುತ್ತದೆ. ಇಷ್ಟು ಹೇಳಿದ ಮಾತ್ರಕ್ಕೆ ಜಾತ್ರೆಯಲ್ಲಿ ಎಲ್ಲವೂ ಸಮಾನತೆಯಿಂದಿರುತ್ತದೆ. ಇಷ್ಟು ಹೇಳಿದ ಮಾತ್ರಕ್ಕೆ ಜಾತ್ರೆಯಲ್ಲಿ ಎಲ್ಲವೂ ಸಮಾನತೆಯಿಂದಿರುತ್ತದೆ. ಭೇದ–ಭಾವ ಇಲ್ಲ ಎಂದು ಹೇಳಿದರೆ ತಪ್ಪಾಗುತ್ತದೆ. ಮೇಲ್ವರ್ಗದ ಜನರಿಗೆ ಒಳ್ಳೆಯ ಉನ್ನತ ಕೆಲಸಗಳು ಹಾಗೆಯೇ ಕೆಳವರ್ಗದವರಿಗೆ ಕೀಳು ಎಂದು ಭಾವಿಸುವ ಕೆಲಸವನ್ನು ಹೇರಿರುವುದ್ನನು ಕಾಣಬಹುದು. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮೇಲ್ವರ್ಗದವರು ತಮ್ಮ ಅನುಕೂಲಕ್ಕಾಗಿ ತಮ್ಮ ಕೈಕೆಳಗಿನ ಕೆಳವರ್ಗದವರ ಮೇಲೆ ದೇವರ ಹೆಸರಿನಲ್ಲಿ ಹೇರಿರುವ ಆಚರಣೆಗಳು ಎಂದು ತಿಳಿದುಬರುತ್ತದೆ.

ಹಬ್ಬ ಮತ್ತು ಜಾತ್ರೆಗಳು ನಮ್ಮ ನೆಲ ಮೂಲ ಸಂಸ್ಕೃತಿಯನ್ನೂ, ಪರಂಪರೆಯನ್ನು ಉಳಿಸುತ್ತವೆ. ಹಾಗೆಯೇ ಅವನ್ನು ಮುಂದಕ್ಕೆ ಕೊಂಡೊಯ್ಯುತ್ತದೆ. ಜನಪದ ಸಾಹಿತ್ಯ ನಮ್ಮಿಂದ ಮರೆಯಾಗುತ್ತಿರುವ ಇಂದಿನ ದಿನಗಳಲ್ಲಿ ಹಬ್ಬ ಮತ್ತು ಜಾತ್ರೆಯ ಸಂದರ್ಭದಲ್ಲಿ ತಮ್ಮೊಳಗಿನ ಹಾಡು, ಕಥೆ, ಗಾದೆ, ಒಗಟು. ಇವುಗಳನ್ನು ನಮ್ಮ ಜನಪದರು ಬಿಚ್ಚಿಡುತ್ತಾರೆ. ಈ ಸಂದರ್ಭದಲ್ಲಿ ಕ್ಷೇತ್ರಕಾರ್ಯ ಮಾಡಿದರೆ ಹಾಡು, ಕಥೆ, ಗೀತೆ ಇವುಗಳನ್ನು ಸಂಗ್ರಹಿಸುವ ಮೂಲಕ ಅವನ್ನು ಮುಂದಿನ ಪೀಳಿಗೆಗೆ ತಲುಪಿಸಬಹುದು. ಈ ದೃಷ್ಟಿಯಿಂದ ಹಬ್ಬ ಮತ್ತು ಜಾತ್ರೆಗಳು ಅತ್ಯಂತ ಪ್ರಮುಖವಾಗುತ್ತವೆ.

ಜಾತ್ರೆಯ ಸಂದರ್ಭದಲ್ಲಿ ಕೆಲವೊಂದು ಮೂಢ ನಂಬಿಕೆ, ಅಂಧಶ್ರದ್ಧೆಗಳು ಇರುತ್ತವೆ. ಅತ್ಯಂತ ನಿಕೃಷ್ಟವಾದ ಸಂಪ್ರದಾಯ ಪದ್ಧತಿಗಳನ್ನು ಉಳಿಸಿಕೊಳ್ಳುವುದಕ್ಕಿಂತ ಬಿಡುವುದೇ ಒಳ್ಳೆಯದು. ಏಕೆಂದರೆ ಕೆಲವೊಂದು ಜಾತ್ರೆಗಳಲ್ಲಿ ಬಸವಿ ಬಿಡುವ ಪದ್ಧತಿ, ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ಸೆಡಿಯಾಡುವುದು, ನರಬಲಿ, ಕೋಣಗಳ ಬಲಿ

ಇಂತಹವುಗಳಿರುತ್ತವೆ ಎಂದು ಹೇಳುತ್ತಾರೆ. ಇಂತಹ ಆಚರಣೆಗಳನ್ನು ಪ್ರಜ್ಞಾವಂತರು ಖಂಡಿಸಬೇಕು. ಕೃಷ್ಣರಾಜನಗರ ತಾಲ್ಲೂಕಿನ ಜಾತ್ರೆಯಲ್ಲಿ ಈ ರೀತಿಯ ಯಾವುದೇ ಕುರುಡು ಸಂಪ್ರದಾಯಗಳಿಲ್ಲದಿರುವುದು ಮಹತ್ವದ ಸಂಗತಿ ಎಂದೆನಿಸುತ್ತದೆ. ದೊಡ್ಡ ದೊಡ್ಡ ಜಾತ್ರೆಗಳು ಅನೇಕ ಸಾಂಕ್ರಾಮಿಕ ರೋಗಗಳನ್ನು ತರುತ್ತವೆ. ಇವುಗಳ ಮೇಲೆ ಗಮನವಿರುವುದು ಒಳಿತು. ಹಾಗೆಯೇ ಜಾತ್ರೆಯಲ್ಲಿ ಎಲ್ಲೆಂದರಲ್ಲಿ ಮಾರುವ ತಿಂಡಿ-ತಿನಿಸುಗಳನ್ನು ತಿನ್ನದಿರುವುದು ಒಳಿತು.

ದಣಿದ ಜೀವಗಳಿಗೆ ಮುದ ನೀಡುವ ಚೈತನ್ಯದಂತೆ ಜಾತ್ರೆಗಳು ಚಾಲ್ತಿಯಲ್ಲಿವೆ. ಜಾತ್ರೆಗಳಲ್ಲಿನ ಕರಕುಶಲ ವಸ್ತುಗಳು, ಆಟಿಕೆಗಳು, ಬಣ್ಣಬಣ್ಣದ ಬಟ್ಟೆ ಉಟ್ಟಿರುವ ಜನ, ತೇರು, ಬಂಡಿ, ಉತ್ಸವ, ತಿಂಡಿ-ತಿನಿಸುಗಳು ಜನರಲ್ಲಿನ ಬೇಸರವನ್ನು ಕಳೆದುಹಾಕಿ ನವ ಚೈತನ್ಯವನ್ನು ಅವರಲ್ಲಿ ಉಂಟಾಗುವಂತೆ ಮಾಡುತ್ತವೆ.

'ಜಾತ್ರೆ' ಎಂಬುದು ದೇವರ ಹೆಸರಿನಲ್ಲಿ ನಡೆಯುವ ಸಾಂಪ್ರದಾಯಿಕ ಪೂಜೆ-ಪುನಸ್ಕಾರಗಳಾಗಿವೆ. ಈ ಜಾತ್ರೆಗಳು ವರ್ಷಕ್ಕೆ ಒಮ್ಮೆಯೋ ಅಥವಾ ಹತ್ತಾರು ವರ್ಷಗಳಿಗೆ ಒಂದು ಬಾರಿಯೋ ನಡೆಯಬಹುದು. ನಾಗರಿಕತೆಯ ಸಂಪರ್ಕ-ವಿಲ್ಲದಿದ್ದಾಗ ಸಂಪರ್ಕ ಸಂಬಂಧ ಕಲ್ಪಿಸುವ ಸುವರ್ಣಸೇತುವೆಯಾಗಿ ಜಾತ್ರೆ ಯಶಸ್ವೀ ಕಾರ್ಯನಿರ್ವಾಹಕವಾಗಿತ್ತು. ಕರ್ನಾಟಕದಲ್ಲಿ ಇಂದು ಸಾವಿರಾರು ಜಾತ್ರೆಗಳು ಕಂಡುಬರುತ್ತವೆಯಾದರೂ ಅವುಗಳ ಆಚರಣೆಗಳಲ್ಲಿ ಪ್ರತಿಯೊಂದು ಜಾತ್ರೆಯೂ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿರುತ್ತವೆ ಮತ್ತು ಅಪೂರ್ವ ಕಲ್ಪನೆಯೂ ಇದಕ್ಕಿರುತ್ತದೆ. ಅಂತಹ ಜಾತ್ರೆಗಳಲ್ಲಿ 'ಕೃಷ್ಣರಾಜನಗರ ತಾಲ್ಲೂಕಿನಲ್ಲಿ ನಡೆಯುವ ಪ್ರಸಿದ್ಧ ಜಾತ್ರೆಗಳನ್ನುನನ್ನ ನಇಬಂಧನೆಗೆ ಆಯ್ಕೆ ಮಾಡಿಕೊಂಡು ಇಲ್ಲಿಯ ಜನರು ಮತ್ತು ಅರ್ಚಕರಿಂದ ಸಂಗ್ರಹಿಸಿದ ಆಚರಣೆ ಮತ್ತು ಸಂಪ್ರದಾಯಗಳನ್ನು ವಿವರಿಸುವ ಪ್ರಯತ್ನ ಮಾಡಿದ್ದೇನೆ. ಆದರೂ ಕೇವಲ ಈ ನಾಲ್ಕು ಜಾತ್ರೆಗಳು ಮಾತ್ರವಲ್ಲದೆ ಹಂಪಾಪುರದ 'ಶ್ರೀದುರ್ಗಾಪರಮೇಶ್ವರಿ ಜಆತ್ರೆ', ಆದಿಶಕ್ತಿ ತೋಪಮ್ಮನವರ ಜಾತ್ರೆ, ದೊಡ್ಡ ಕೊಪ್ಪಲಿನ 'ಪಟ್ಟಲದಮ್ಮ ಜಾತ್ರೆಗಳು' ಸಹ ತಮ್ಮದೇ ಆದ ವಿಶಿಷ್ಟ ಆಚರಣೆ ಮತ್ತು ಸಂಪ್ರದಾಯಗಳಿಂದಾಗಿ ಮಹತ್ವವನ್ನು ಪಡೆದಿವೆ. ಸಮಯದ ಅಭಾವದಿಂದಾಗಿ ನಾನು ಅವುಗಳನ್ನು ಕೈಬಿಟ್ಟಿದ್ದೇನೆ.

## ಪರಾಮರ್ಶನ ಗ್ರಂಥಗಳು

೧. ಬೋರಲಿಂಗೇಗೌಡ.ಹಿ.ಚಿ, ಮಂಟೇಸ್ವಾಮಿ ಕಾವ್ಯ (ಸಂ.), ಹಂಪಿ ವಿ.ವಿ.,

೨. ವೆಂಕಟೇಶ್ ಇಂದ್ವಾಡಿ, ಧರೆಗೆ ದೊಡ್ಡವರ ಕಥೆ, ಹಂಪಿ ವಿ.ವಿ.

೩. ತೇಸಿ ವಿಶ್ವೇಶ್ವರಯ್ಯ, ಬಯಲ ಬೆಳಗು, ಸಂವಹನ, ಮೈಸೂರು, ೨೦೦೦

೪. ಶಿವಕುಮಾರಸ್ವಾಮಿ.ಸಿ.ಎಸ್, ಕರ್ನಾಟಕ ಜಾತ್ರೆಗಳು (ಸಂ.), ಕನ್ನಡ ವಿಭಾಗ, ಮೈಸೂರು ವಿವಿ, ೧೯೮೮.

೫. ಜವರೇಗೌಡ.ದೇ, ಜಾನಪದ ವಾಹಿನಿ, ಕವಿಶೈಲ ಮುದ್ರಣಾಲಯ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೭೭.

೬. ಉಮೇಶ ಕೊಲ್ಲಿವಾಕಿ.ಎಂ.ಎಸ್, ದಂಡಕಾರಣ್ಯ ಚುಂಚಾರಣ್ಯ ಕ್ಷೇತ್ರ ಪರಿಚಯ

೭. ಮುಮ್ಮಡಿ ಕೃಷ್ಣರಾಜ ಒಡೆಯರು, ಎಡತೊರೆ ಅರ್ಕಪುಷ್ಕರಣಿ ಮಹಾತ್ಮೆ

೮. ಜವರೇಗೌಡ.ದೇ, ಜಾನಪದ ಅಧ್ಯಯನ, ಚೇತನಬುಕ್‌ಹೌಸ್, ನಾರಾಯಣಶಾಸ್ತ್ರಿ ರಸ್ತೆ, ಮೈಸೂರು-೨೪, ೧೯೯೧.

೯. ವಿಶ್ವಕೋಶ, ೮ನೇ ಸಂಪುಟ.

೧೦. ಸೂರ್ಯನಾಥ ಯು.ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ – ೧.

೧೧. ರಾಜಶೇಖರ್.ಪಿ.ಕೆ, ಕಲ್ಯಾಣ ಪಥ, ಶ್ರೀ ಶಿವರಾತ್ರೀಶ್ವರ ಜಯಂತಿ ಮಹೋತ್ಸವ ಸಮಿತಿ, ಕೆ.ಆರ್.ನಗರ, ೧೯೯೭.

೧೨. ರುದ್ರಪ್ಪ, ವಕೀಲರು, ಜನಪದ ಸಾಹಿತ್ಯ ಮಂಟೇಸ್ವಾಮಿ, ವಿಶ್ವ ಆಧ್ಯಾತ್ಮ ವಿಕಾಸ ಪ್ರತಿಷ್ಠಾನ, ಬೆಂಗಳೂರು, ೧೯೯೫.

೧೩. ಮಂಜುಳಾದೇವಿ.ಎಂ.ಎಸ್. ಮತ್ತು ರೂಪರಾಜ್.ಎಂ.ಎಸ್, ಧರೆಗೆ ದೊಡ್ಡವರು ಶ್ರೀ ಮಂಟೇಸ್ವಾಮಿ, ರಾಚಪ್ಪಾಜಿ ಇವರ ಲೀಲಾಪವಾಡಗಳು

೧೪. ರಾಜಪ್ಪ.ಟಿ.ಎಸ್, ರಾಚಪ್ಪಾಜಿ, ೧೯೮೨.

೧೫. ಸ್ವಾಮಿಪೌಲುಸ್.ವಂ, ಡೋರ್ನಹಳ್ಳಿ ಮ್ಹಾಸಂತ ಅಂತೋಣಿಯವರ ಭಕ್ತಿಮಾಲೆ, ೨೦೦೬.

## ವಕ್ತೃ ವಿವರ

| ಕ್ರಮ ಸಂಖ್ಯೆ | ಹೆಸರು | ವಯಸ್ಸು | ಸ್ಥಳ |
|---|---|---|---|
| ೧. | ಶ್ರೀ ಯು.ಶ್ರೀಧರರವರು ಅರ್ಚಕರು | ೫೬ | ಶ್ರೀರಾಮದೇವಾಲಯ, ಚುಂಚನಕಟ್ಟೆ |
| ೨. | ಶೇಷಗಿರಿರಾವ್, ಅರ್ಚಕರು | ೬೩ | ಶ್ರೀರಾಮದೇವಾಲಯ, ಚುಂಚನಕಟ್ಟೆ |
| ೩. | ಕಿರಣ್, ಅರ್ಚಕರು | ೪೦ | ಎಡತೊರೆ, ಅರ್ಕೇಶ್ವರದೇವಾಲಯ |
| ೪. | ಲಕ್ಷ್ಮೀನಾರಾಯಣರಾವ್, ಅರ್ಚಕರು | ೫೪ | ಎಡತೊರೆ, ಅರ್ಕೇಶ್ವರ ದೇವಾಲಯ |
| ೫. | ರಾಜಪ್ಪನವರು, ಸರ್ವೇಯರ್ | ೪೩ | ಎಡತೊರೆ |
| ೬. | ಚಂದ್ರೇಗೌಡರು | ೬೦ | ಚುಂಚನಕಟ್ಟೆ |
| ೭. | ಲಿಂಗರಸಯ್ಯ | ೪೨ | ಚುಂಚನಕಟ್ಟೆ |
| ೮. | ನಂಜುಂಡಸ್ವಾಮಿ | ೫೦ | ಚುಂಚನಕಟ್ಟೆ |
| ೯. | ಸಿದ್ಧಯ್ಯ | ೪೫ | ಹೆಬ್ಬಾಳು |
| ೧೦. | ಮಹಾದೇವಪ್ಪ | ೫೫ | ಹೆಬ್ಬಾಳು |
| ೧೧. | ಬಸಮ್ಮಣ್ಣಿ | ೬೪ | ಹೆಬ್ಬಾಳು |
| ೧೨. | ಅಲೆಕ್ಸ್ ಪ್ರಶಾಂತ್ ಸಕ್ವೇರಾ | ೩೫ | ಡೋರ್ನಹಳ್ಳಿ |
| ೧೩. | ಮೇರಿ ಡಿಸೋಜಾ | ೪೬ | ಡೋರ್ನಹಳ್ಳಿ |
| ೧೪. | ಲಿಲ್ಲಿ ರೀಟಾ | ೪೦ | ಡೋರ್ನಹಳ್ಳಿ |
| ೧೫. | ಮಾರ್ಟಿನ್ | ೩೩ | ಡೋರ್ನಹಳ್ಳಿ |